# ಬೆಟ್ಟಕ್ಕೆ ಚಳಿಯಾದರೆ



ಮಕ್ಕಳ ನಾಟಕ

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ

BEṬṬAKKE CHAḶIYĀDARE : (Kannada) Children's Play ; Published by Akshara Prakashana, Sagar, (Karnataka) ; Printed at Sagara Mudrana, Sagar (Karnataka) 577401 ; First Impression : Aug. 1981 ; 1500 Copies, 38 Pages ; Price Rupees. Four.

ಬೆಲೆ : ನಾಲ್ಕು ರೂಪಾಯಿ

ಗೆ. ಪಿ. ಎಸ್. ರಾಮಪ್ಪನವರು ವಿಜಯ ತೆಂಡೂಲ್ಕರ್ ಅವರ ಮಕ್ಕಳ ನಾಟಕವೊಂದನ್ನು ಅನುವಾದಿಸಿದ್ದರು. ಆದರಲ್ಲಿ ಬರುವ ಟಪ್ಪಾಲು ಡಬ್ಬಿ, ಟೆಲಿಫೋನ್ ಕಂಬ, ಪೋಸ್ಟರ್ ಮುಂತಾದ ಪಾತ್ರಗಳ ಆಧಾರದ ಮೇಲೆ ಬೇರೆ ನಾಟಕವೊಂದನ್ನು ರಚಿಸಲು ಅವರು ಸೂಚಿಸಿದರು. ೧೯೭೯ ಅಕ್ಟೋಬರ್‌ನಲ್ಲಿ ನಮ್ಮ ನೀನಾಸಮ್ ಆಶ್ರಯದಲ್ಲಿ ಶಿವಮೊಗ್ಗ ಭಾಲಭವನದ ಮಕ್ಕಳಿಗೆ ಒಂದು ಶಿಬಿರ ನಡೆಸಿದಾಗ, ಅವರಿಂದ ಆಡಿಸಲಿಕ್ಕಾಗಿ ಅಕ್ಷರ ಮತ್ತು ನಾನು ಕೂಡಿ ಈ ನಾಟಕ ರಚಿಸಿಕೊಂಡೆವು. ಮುಂದೆ, ನೀನಾಸಮ್ ಮಕ್ಕಳು ಕೂಡ ಈ ನಾಟಕವನ್ನು ಪ್ರಯೋಗಿಸಿದರು.

ಪ್ರಯೋಗಕ್ಕೆ ಹೆಚ್ಚಿನ ಸ್ವಾತಂತ್ರ್ಯ ಸಿಗತಕ್ಕದ್ದೆಂಬ ದೃಷ್ಟಿಯಿಂದ ನಾಟಕದ ರಚನೆಯನ್ನು ಶಿಥಿಲವಾಗಿಟ್ಟಿದೆ. ಪ್ರಯೋಗಕಾರರು ಬೇಕೆನ್ನುವಂತೆ ಬದಲಿಸಿಕೊಳ್ಳಲು ಅವಕಾಶವಿದೆ.

ಕೆ. ವಿ. ಸುಬ್ಬಣ್ಣ

## ಪಾತ್ರಗಳು :

ಕಳ್ಳ
ಹುಡುಗಿ
ಮುದುಕ

ಮರ
ಟೆಲಿಫೋನ್ ಕಂಬ
ಪೋಸ್ಟ್‌ಡಬ್ಬ
ಪೋಸ್ಟರ್ ನಾಚ್‌ವಾಲಿ

ಶಾಲಾ ಬಾಲಕ ಬಾಲಕಿಯರು
ನಾಗರಿಕರು

ಮೇಯರ್
ಡೆಪ್ಯುಟಿ ಮೇಯರ್
ಪೋಲಿಸ್ ಕಾನ್‌ಸ್ಟೇಬಲ್‌ಗಳು
ಪೋಲಿಸ್ ಅಧಿಕಾರಿ

ಸನಾತನ ಧರ್ಮಸಂಸ್ಥೆಯ ಸದಸ್ಯರ ಗುಂಪು
ಪವಾಡ ವಿರೋಧಿ ಸಂಘದ ಗುಂಪು

# ಬೆಟ್ಟಕ್ಕೆ ಚಳಿಯಾದರೆ

ಊರ ಹೊರಗಿನ ಚಿಕ್ಕ ಬಯಲು. ನಾಟಕದುದ್ದಕ್ಕೂ ಒಮ್ಮೊಮ್ಮೆ ಗಿರಣಿಯ ಸೈರನ್‌ಸಂಥ, ಪಟ್ಟಣದ ಔದ್ಯಮಿಕ ಸದ್ದುಗದ್ದಲ ಕೇಳಿಬರುವುದುಂಟು. ರಂಗದ ಬಯಲಿನಲ್ಲಿ ಮುಖ್ಯವಾಗಿ ಕಾಣುವುದೆಂದರೆ—ಒಂದು ಭಾರೀ ಮರ, ಒಂದು ಟೆಲಿಫೋನ್ ಕಂಬ, ಒಂದು ಪೋಸ್ಟ್ ಡಬ್ಬಿ ಹಾಗೂ ಒಂದು ಮುರುಕು ಗೋಡೆ ಮತ್ತು ಅದಕ್ಕೆ ಅಂಟಿಸಿರುವ, ನರ್ತಕಿಯೊಬ್ಬಳ ಚಿತ್ರವಿರುವ ಜಾಹಿರಾತಿನ ಪೋಸ್ಟರ್. ಈ ಬಯಲಿನಲ್ಲಿ, ಊರಿನಿಂದ ಬರುವ ಎರಡು ರಸ್ತೆಗಳು ಕೂಡಿಕೊಂಡು ಮುಂದುವರಿದು ರಂಗವನ್ನು ದಾಟಿ ಹಾದಿವೆ. ರಸ್ತೆ ಕೂಡುವಲ್ಲಿ ಒಬ್ಬ ಮುದುಕ ನಿಶ್ಚಲ ನಿಂತಿದ್ದಾನೆ ; ಪ್ರತಿಮೆಯ ಹಾಗೆ ಕಾಣುತ್ತಾನೆ.

ಸಂಜೆಯ ಬೆಳಕು ಕತ್ತಲಲ್ಲಿ ಕರಗಿಕೊಳ್ಳುತ್ತಿದೆ.

ಕ್ರಮೇಣ ದಾರಿಗುಂಟ ಚೆಲ್ಲುವ ಹಾಯ್‌ಬೆಳಕಿನಲ್ಲಿ ಮಗುವನ್ನು ಹೊತ್ತ ಕಳ್ಳನ ಪ್ರವೇಶ. ಆತ, ರಂಗಕ್ಕೆ ಬಂದು ಅಲ್ಲೇ ಒಂದು ಕಡೆ ಮಗುವನ್ನಿಳಿಸಿ ಸುತ್ತಲೂ ಪರೀಕ್ಷಿಸುತ್ತಾನೆ.

ಕಳ್ಳ : ಯಾರೂ ಇಲ್ಲ...ಇಲ್ಲ...ಊಹುಂ, ಯಾರ್‍ಯಾರೂ ಇಲ್ಲ.... (ಖಳನಾಯಕನಂತೆ ಗಹಗಹಿಸಿ ನಗುತ್ತಾನೆ) ಸರಿಯಾದ ಜಾಗ!... (ದೂರದ ಪಟ್ಟಣದಿಂದ ಕೇಳುವ ಸೈರನ್ ಕೂಗು)....ಊರು ಇನ್ನೂ ನಾಲ್ಕು ಫರ್ಲಾಂಗ್ ಆಚೆ ಇರಬೇಕು!...(ನೋಡಿ) ಹಾಂ. ಊರಲ್ಲಿ

ದೀಪ ಹೊತ್ತಿಕೋತಾ ಇದೆ....ಏನಾದ್ರೂ ಒಳ್ಳೇ ಜಾಗಾನೇ ಸಿಕ್ತು! ಇಲ್ಲಿ ನರಹುಳ ಕೂಡಾ ಇಲ್ಲ. (ಗಹಗಹಿಸಿ ನಗುತ್ತ, ಅನಿರೀಕ್ಷಿತವಾಗಿ ಒಮ್ಮೆಲೇ ಪ್ರೇಕ್ಷಕರ ಕಡೆ ತಿರುಗಿ, ನೇರವಾಗಿ ಅವರ ಕಡೆಗೇ ನಡೆಯುತ್ತ)...ನೀವು ಪರವಾಗಿಲ್ಲ, ಬಿಡಿ.....ಪಾಪ! ಪಾಪದೋರು! (ಅಟ್ಟಹಾಸ) ನಾನು ಯಾರು ಗೊತ್ತೆ? ಹ್ಹಹ್ಹ ಗೊತ್ತಿಲ್ಲ!...ನಾನು ಒಬ್ಬ ಕಳ್ಳ, ಡಾಕು! ಹಹ್ಹಹ್ಹ ಖಲಂದರ್ ಡಾಕು! ಖಲಂದರ್ ಡಾಕೂ ಜಲಂಧರ್ ವಾಲಾ! ಹಹ್ಹಹ್ಹಹ್ಹ!...ಕಳ್ಳ ಅಂದ್ರೆ ಜಿನಸಿ ಕದಿಯೋ ಚಿಲ್ರೆ ಕಳ್ಳ ಅಲ್ಲ, ಜೀವ ಕದಿಯೋ ರುಸ್ತುಂ ಡಾಕು. ಮಾಲು ಕದಿಯೋ ಕಳ್ಳ ಅಲ್ಲ, ಮಕ್ಕಳ ಕದಿಯೋ ಡಾಕೂ! ಹಹ್ಹಹ್ಹಹ್ಹ!....ನಾಟಕ ಸಿನೆಮಾಗಳಲ್ಲಿ ಬರ್‍ತಾರಲ್ಲ ಅಂಥಾ ಡಾಕು ಅಂತ ತಿಳಿದು ಬಿಟ್ಟೀರಾ, ಅಲ್ಲ. ನಾಟಕ ನೋಡೋಕೆ ಬರ್‍ತೀರಲ್ಲ, ನಿಮ್ಮಂಥ ಹುಡುಗರನ್ನ ಮಾಯಕ ಮಾಡಿ ಫಟ್ ಅಂತ ಎತ್ತಿಕೊಂಡು ಹೋಗಿ ಬಿಡೋ ಡಾಕು!....ಇಲ್ನೋಡಿ, ಈ ಹುಡುಗೀನ ಹಾಗೇ ಕದ್ಕೊಂಡು ಬಂದಿದೇನೆ. ಅದೊಂದು ಭಾರೀ ಪಟ್ಟಣ. ಸಾಲು ಸಾಲು ಉಪ್ಪರಿಗೆ ಮನೆಗಳು; ನಡೂರಾತ್ರೀಲೂ ರಸ್ತೇಲಿ ಜನ ಫೇರಾಯಿಸ್ಕೊಂಡು ನಡೀತಿರ್‍ತಾರೆ. ಅಂಥಾ ಪಟ್ಟಣದಲ್ಲಿ, ಹನ್ನೆರಡು ಮಹಡಿ ಕಟ್ಟಡದಲ್ಲಿ ಆರನೇ ಮಹಡೀಲಿ ಇವರ ವಾಸ. ಎಲೆಕ್ಟ್ರಿಕ್ ಕಂಬ ಹತ್ತಿದೆ, ನೂಲೇಣಿ ಒಗೆದು ಆರನೇ ಮಹಡಿ ಹತ್ತಿ ಮಲಗಿದ್ದ ಈ ಹುಡುಗೀನ ಮಾಯಕ ಮಾಡಿ ಎತ್ತಿಕೊಂಡು ಬಂದು ಬಿಟ್ಟೆ.... ಅಲ್ಲಿಂದ ೫೦ ಮೈಲಿ ಘೋರ ಕಾಡು, ಆಮೇಲೆ ೫೦ ಮೈಲಿ ಟಾರ್ ರೋಡ್—ಇಷ್ಟು ದೂರ ಅವಳನ್ನು ಹೊತ್ತುಕೊಂಡು ಬಂದೆ!... (ಕೊಂಚ ಲಘುವಾಗಿ—ಸುತ್ತ ಪರೀಕ್ಷಿಸಿ) ಒಳ್ಳೇ ಜಾಗ....ಇಲ್ನೊಂದು ಪೋಸ್ಟ್‌ಡಬ್ಬಿ....ಮರ....ಟೆಲಿಫೋನ್ ಕಂಬ....... (ಮುದುಕನನ್ನು ನೋಡಿ) ಓ, ಈ ಪ್ರತಿಮೆ ಎಷ್ಟು ಚೆನ್ನಾಗಿ ಕೆತ್ತಿದಾರೆ!....ನಿಜವಾಗಿ ಮನುಷ್ಯ ಇದ್ದ ಹಾಗೇ ಇದೆ!....(ಪುನಃ ತನ್ನ ಹಿಂದಿನ ಮಾತು

ನೆನಪಿಸಿಕೊಂಡು)—ಇನ್ನು ಸುಲಭ, ಬಿಡಿ. ಅಕ್ಷರ ಗೊತ್ತಾಗಬಾರ್ದು' ಹಾಗೆ ಎಡಗೈಯಲ್ಲಿ ಕಾಗದ ಬರೆದು ಪೋಸ್ಟ್ ಮಾಡಿದರಾಯ್ತು ಇವಳ ಅಪ್ಪನೀಗೆ. ಹೇಗೂ ಇಲ್ಲಿ ಪೋಸ್ಟ್ ಡಬ್ಬೀನೂ ಇದೆ...ಇಕೋ, ಈ ಮರದ ಕೆಳಗೆ ೫೦ ಸಾವಿರ ರೂಪಾಯಿ ತಂದಿಡಬೇಕು ; ಮರುದಿನ ಅಷ್ಟೇ ಹೊತ್ತಿಗೆ ಈ ಹುಡುಗಿ ಇದೇ ಮರದ ಕೆಳಗೆ ಸಿಕ್ಕತಾಳೆ—ಅಂತ ಬರೆದು ಹಾಕಿ ಬಿಟ್ಟರೆ—ಮೂರು ದಿನಕ್ಕೆ ಐವತ್ತು ಸಾವಿರ ಸಂಪಾದನೆ ! ಹೇಗಿದೆ ಉಪಾಯ, ಹಹ್ಹಹ್ಹಹ್ಹಹ್ಹ !....

*ಕಳ್ಳನ ನಗುವಿನಿಂದ ಹುಡುಗಿಗೆ ಎಚ್ಚರವಾಗಿದೆ. ಆಕೆ ಎದ್ದು ಸುತ್ತ ನೋಡಿ ಅಮ್ಮಾ......ಅಮ್ಮಾ......ಎನ್ನುತ್ತಿದ್ದಾಳೆ.*

ಕಳ್ಳ : ಓ, ಹುಡುಗೀಗೆ ಎಚ್ಚರಾಗಿ ಬಿಡ್ತು !...ಈಗ್ಲೇ ಅವಳನ್ನ ಚೆನ್ನಾಗಿ ಹೆದರಿಸಿ ಹೇಳಿದ ಹಾಗೆ ಕೇಳೋ ಹಾಗೆ ಮಾಡ್ಕೋಬೇಕು !....ಇರಲಿ.

*ಹುಡುಗಿಯ ಸಮೀಪ ಹೋಗುತ್ತಾನೆ.*

ಕಳ್ಳ : (ಗಹಗಹಿಸಿ) ಏಯ್ ಚೋಕ್ರಿ, ನಾನು ಯಾರು ಗೊತ್ತಾ ?

ಹುಡುಗಿ : ಆಂ ?....

*ಕೆಳಕ್ಕಿಳಿದು ಕಳ್ಳನ ಎದುರು ನಿಂತು ಪರೀಕ್ಷಿಸಿ ನೋಡುತ್ತಾಳೆ.*

ಕಳ್ಳ : ಹಹ್ಹಹ್ಹಹ್ಹ ! ಏಯ್ ಚೋಕ್ರಿ, ನಾನು ಯಾರು ?

ಹುಡುಗಿ : ಮಾವ !

ಕಳ್ಳ : ಮಾವ ?

ಹುಡುಗಿ : ಹುಂ. ಅಪ್ಪ ಅಲ್ಲ, ಅಣ್ಣ ಅಲ್ಲ, ಚಿಕ್ಕಪ್ಪ ಅಲ್ಲ,....ಆದ್ರಿಂದ ಮಾವನೇ !

ಕಳ್ಳ : (ಪ್ರೇಕ್ಷಕರ ಕಡೆ) ಎಲ ಎಲಾ !....ಮೂರು ಮೆಣಸಿನಕಾಯಿ ಉದ್ದದ ಪೋರಿ ಒಳ್ಳೇ ಜೋರಾಗಿ ಇರೋ ಹಾಗಿದೆ ! ಇರ್ಲಿ....ಈಗ್ಲೇ ಸ್ವಲ್ಪ ಗಟ್ಟಿ ಹೆದರಿಸಿ ಇಟ್ಕೋಬೇಕು !...ಏಯ್ ಚೋಕ್ರಿ, ನಾ ಮಾವ ಅಲ್ಲ, ಡಾಕು ! ಹಹ್ಹಹ್ಹಹ್ಹ, ಡಾಕು ! ಖಲಂದರ್ ಡಾಕೂ, ಜಲಂಧರ್ ವಾಲಾ ! ಹಹ್ಹಹ್ಹ !

ಹುಡುಗಿ : ಹಾಗಾದ್ರೆ ಡಾಕು ಮಾವ !

ಕಳ್ಳ : ನಾನು ಹುಡುಗರನ್ನ ಕದಿಯೋ ಡಾಕು ! ಹಹ್ಹಹ್ಹ !

ಹುಡುಗಿ : ಮತ್ತೆ ಡಾಕು ಆದ್ರೆ ಯಾಕೆ ಹೀಗಿದೀಯಾ ?
ಕಳ್ಳ : ಆಂ ? ಹ್ಯಾಗಿದೇನೆ ?
ಹುಡುಗಿ : ನಿನ್ನ ಬಟ್ಟೆ ನೋಡು.
ಕಳ್ಳ : (ನೋಡಿಕೊಂಡು) ಏನಾಗಿದೆ ಬಟ್ಟೆ ? (ಅನುಮಾನದಿಂದ ಪ್ರೇಕ್ಷಕರಿಗೆ ಮುಂಭಾಗ ತೋರಿಸುತ್ತ) ನನ್ನ ಬಟ್ಟೆ ಹಿಂಬದಿಗೆ ಏನಾದ್ರೂ ಆಗಿದೆಯಾ ?...
ಹುಡುಗಿ : ಡಾಕು ಅಂದ್ರೆ ಉದ್ದಾನುದ್ದ ಕಪ್ಪು ಅಂಗಿ ಇರ್ಬೇಕು, ಕಣ್ಣಿಗೆ ಕಪ್ಪು ಪಟ್ಟಿ ಇರಬೇಕು ; ಕೈಯಲ್ಲಿ ಚೂಪಾದ ಬಾಕು ಇರಬೇಕು........
ಕಳ್ಳ : ಓಹೋಹೋಹೋ ! ಹಾಗಾ ? ಚೋಕ್ರೀ, ನಾನು ನಿನ್ನ ಕತೇ ಪುಸ್ತಕದಲ್ಲಿರೋ ಕಳ್ಳ ಅಲ್ಲ. ನಿಜವಾದ ಡಾಕು. ಹುಡುಗರನ್ನ ಕದಿಯೋ ಡಾಕು !....ಹಹ್ಹಹ್ಹ ! ಈಗ ನಿನ್ನನ್ನ ಕದ್ಕೊಂಡು ಬಂದಿದೇನೆ ನೋಡು.
ಹುಡುಗಿ : ನನ್ನ ಕದ್ಕೊಂಬಂದ್ಯಾ ?
ಕಳ್ಳ : ಹುಂ. ನಿನ್ನೆ ರಾತ್ರಿ ಮೆತ್ತನೆ ಹಾಸಿಗೆ ಮೇಲೆ ಮಲಗಿದ್ದೆ, ಹೌದಾ ?... ನಡೂ ರಾತ್ರೀಲಿ, ನಾನು ನಿಮ್ಮ ಮನೇ ಎದುರಿನ ಎಲೆಕ್ಟ್ರಿಕ್ ಕಂಬ ಹತ್ತಿ, ಅಲ್ಲಿಂದ ನೂಲೇಣಿ ಒಗೆದು ಅದರ ಮೇಲೆ ಹತ್ತಿ ಬಂದು ನಿನ್ನ ಹೊತ್ಕೊಂಡು ಬಂದೆ.
ಹುಡುಗಿ : ನಂಗೆ ಎಚ್ಚರ ಆಗಲಿಲ್ವಾ ?
ಕಳ್ಳ : ನಾ ಡಾಕು ಅಲ್ವಾ ? ಹಹ್ಹಹ್ಹ ! ನಿಂಗೆ ಎಚ್ಚರ ಆಗದ ಹಾಗೆ ಮಾಯಕ ಮಾಡ್ದೆ.
ಹುಡುಗಿ : ಆಮೇಲೆ ?
ಕಳ್ಳ : ಆಮೇಲೆ ನಿನ್ನ ಹೊತ್ಕೊಂಡು ಹೊಂಟೆ. ೫೦ ಮೈಲು ಘೋರ ಕಾಡು, ೫೦ ಮೈಲು ಟಾರ್ ರೋಡು— ನಡದೂ ನಡದೂ ಅಂತೂ ಇವತ್ತು ಸಾಯಂಕಾಲ ಇಷ್ಟು ಹೊತ್ತಿಗೆ ಇಲ್ಲಿಗೆ ಬಂದ್ಯೆ
ಹುಡುಗಿ : ನನ್ನ ಯಾಕೆ ಸುಮ್ನೆ ಹೊತ್ಕೊಂಡು ಬಂದೆ ?
ಕಳ್ಳ : ಹೇಳಲಿಲ್ವಾ ನಾನು ಡಾಕು ಅಂತ ! ಹಹ್ಹಹ್ಹ !....

ಹುಡುಗಿ : ನನ್ನ ಎಬ್ಬಿಸಿದ್ರೆ ನಾನು ನಡಕೊಂಡು ಬರ್ತಿದ್ದೆ.

ಕಳ್ಳ : ಆಮೇಲೆ ನೀನು ಅತ್ತು, ಎಲ್ಲರಿಗೂ ಗೊತ್ತಾಗಿ ನನ್ನ ಪೋಲಿಸ್ನೋರು ಹಿಡ್ಕೊಂಡು ಹೋಗ್ತಿದ್ರು.

ಹುಡುಗಿ : ಇಲ್ಲ. ನಾ ಅಳ್ತಿರಲಿಲ್ಲ. ನೀ ಎಬ್ಬಿಸಿ ಹೇಳಿದ್ರೆ ನಾನು ನಿನ್ನ ಜತೆ ನಡಕೊಂಡು ಬಂದು ಬಿಡ್ತಿದ್ದೆ.

ಕಳ್ಳ : ನಡಕೊಂಡು ಬರ್ತಿದ್ಯಾ? ಎಂಥಾ ಕತ್ತಲ ರಾತ್ರಿ ಗೊತ್ತಾ ?

ಹುಡುಗಿ : ರಾತ್ರಿ ಅಂದ್ರೆ ಭಾರೀ ಖುಷಿ ನಂಗೆ. ರಾತ್ರಿ ಹೊತ್ತು ನಡೆಯೋಕೆ ಮಜಾ ಇರತ್ತೆ.

ಕಳ್ಳ : ಮಜಾನಾ ?....ಎಂಥಾ ಭಾರೀ ಕಾಡಿನಲ್ಲಿ ನಡಕೊಂಡು ಬರ್ಬೇಕು ಗೊತ್ತಾ ?

ಹುಡುಗಿ ; ಕಾಡು ಅಂದ್ರೆ ನಂಗೆ ತುಂಬಾ ಇಷ್ಟ. ರಾತ್ರಿ, ಕಾಡಲ್ಲಿ ನಡಕೊಂಡು ಹೋಗೋಣ ಅಂದ್ರೆ ಸಾಕಿತ್ತು, ಬಂದುಬಿಡ್ತಿದ್ದೆ.

ಕಳ್ಳ : ಅಯ್ಯೋ ಚೋಕ್ರಿ, ಎಷ್ಟು ದೂರ ಗೊತ್ತಾ ? ನೂರು ಮೈಲಿ, ಒಂದು ನೂರು ಮೈಲಿ ! ನೀ ನಡೀತಿದ್ಯಾ ?

ಹುಡುಗಿ : ನಿನ್ನ ಹತ್ತಿರ ಕುದುರೆ ಇದ್ರೆ ಅದರ ಮೇಲೆ ಹತ್ಕೊಂಡು ಬರಬಹುದಿತ್ತು ಇಬ್ರೂ. ಇಲ್ದಿದ್ರೆ, ಒಂದು ಕೋಲು ತಗೊಂಡು ಅದನ್ನೇ ಕುದುರೆ ಮಾಡಿ ಹತ್ತಿಕೊಂಡು ಬರಬಹುದಿತ್ತು !

ಕಳ್ಳ : (ಪ್ರೇಕ್ಷಕರಿಗೆ) ಅಯ್ಯೊ, ಎಂಥಾ ಹುಚ್ಚು ಹುಡುಗಿ ಇದು !

ಹುಡುಗಿ : ಕಾಡು ಅಂದ್ರೆ ಹುಲಿ ಸಿಂಹ ಆನೆ ಎಲ್ಲಾ ಇರುತ್ತೆ ಅಲ್ವಾ ?....... ಎಷ್ಟು ಚೆನ್ನಾಗಿರುತ್ತೆ !

ಕಳ್ಳ : ಏ ಚೋಕ್ರಿ.........

ಹುಡುಗಿ : ಚೋಕ್ರಿ ಅಂತಲ್ಲ ನನ್ನ ಹೆಸರು. ಚಲಾಕಿ ಅಂತ. ಅಮ್ಮ ಚಾಕಿ ಅಂತಾಳೆ. ಉಳಿದೋರೆಲ್ಲಾ ಚಲಾಕ ಅಂತ್ಲೇ ಕರೆಯೋದು.

ಕಳ್ಳ : ಆಗ್ಲಿ, ನನ್ನ ಕಂಡ್ರೆ ನಿಂಗೆ ಹೆದರಿಕೆ ಆಗೋಲ್ವ ?

ಹುಡುಗಿ : ಹೆದರಿಕೆ ? ಯಾಕೆ ?

ಕಳ್ಳ : ನಾನು ಡಾಕು ! ಖಲಂದರ್ ಡಾಕು ಜಲಂಧರ್‌ವಾಲಾ–ಅವಕ್ಕೇ

ಹಹ್ಹಹ್ಹ !......(ಕೂರುವನು)

ಹುಡುಗಿ ಎದ್ದು ಆತನನ್ನು ಸುತ್ತಾ ನೋಡಿ, ಹತ್ತಿರ ಬಂದು ತಟ್ಟನೆ ಆತನ ಟೋಫನ್ ಗಡ್ಡ ಮೀಸೆ ಕಿತ್ತು ಹಾಕಿ ನಗುವಳು.

ಕಳ್ಳ : ಏಯ್ ಏಯ್ ಏಯ್ !.......

ಹುಡುಗಿ : ನಂಗೊತ್ತು, ಡಾಕು ಅಂದ್ರೆ ಟೋಫನ್ ಹಾಕ್ಕೊಂಡು ಗಡ್ಡ ಮೀಸೆ ಹಚ್ಕೊಂಡಿರ್‍ತಾರೆ ಅಂತ. ನಾ ನಾಟಕದಲ್ಲಿ ನೋಡಿದೇನೆ–ಹೀಗೇ ಮೀಸೆ ಕಿತ್ತು ಎಸೆಯೋದನ್ನ ! (ಎದುರು ನಿಂತು ಕುಣಿಯುತ್ತ) ಈಗ ನೀ ಡಾಕು ಮಾವ ಅಲ್ಲ, ಬರೀ ಮಾವ !.......ಮಾವ ! .......ಚಂದಕ್ಕಿ ಮಾವ, ಚಕ್ಕುಲಿ ಮಾವ !

(ಹಾಡು ಕುಣಿತದ ಸಮೇತ) ಚಂದಕ್ಕಿ ಮಾಮು । ಚಕ್ಕುಲಿ ಮಾಮು ।
ತಂದಾನಿ ತಾನ ತಾ ಮಾಮಾ ।...

ಕಳ್ಳ : (ಪ್ರೇಕ್ಷಕರಿಗೆ) ಇದೊಳ್ಳೇ ಗ್ರಹಚಾರದ ಹುಡುಗಿ !....ಇಷ್ಟು ದೂರ ಇದನ್ನ ಹೊತ್ತುಕೊಂಡು ಬಂದು ಸುಸ್ತಾಗಿದೆ. ವಿಪರೀತ ಹಸಿವಾಗ್ತಾ ಇದೆ....ಹತ್ತಿರದಲ್ಲೇ ಊರಂತೂ ಇದೆ. ಅಲ್ಲಿ ಹೋಗಿ ಏನಾದರೂ ತಿಂದು ಬರೋದೇ ಸರಿ....ಪಾಪ, ಈ ಹುಡುಗೀಗೂ ಹಸಿವಾಗಿರ್‍ಬೇಕು. ಏನಾದರೂ ತಿನ್ನೋಕೆ ಕೊಡಬೇಕು....ಆದ್ರೆ ಈ ಹುಡುಗಿ ಕರ್‍ಕೊಂಡು ಹೋಗೋ ಹಾಗಿಲ್ಲ....ಯಾರಿಗಾದ್ರೂ ಅನುಮಾನ ಬಂದು ಸಿಕ್ಕಿ ಬಿಳೋದೇ ಸರಿ.... ಇವಳನ್ನ ಇಲ್ಲೇ ಬಿಟ್ಟು ಹೋಗಬೇಕು, ಅಷ್ಟೆ. ಅವಳಿಗೆ ಇಲ್ಲೇ ಏನಾದ್ರೂ ತಿನ್ನೋಕೆ ತಂದು ಕೊಟ್ಟರಾಯ್ತು... ಹೇಗೂ, ಇವಳಪ್ಪನ ಹಣ ಕೈಗೆ ಬರೋತನಕ, ನಾವು ಇಲ್ಲೇ ಎಲ್ಲಾದ್ರೂ ಅಜ್ಞಾತವಾಸ ಮಾಡಬೇಕು, ಪಾಂಡವರು ಮಾಡಿದ್ದರಲ್ಲ ಹಾಗೆ!.... (ಹುಡುಗಿ ಹತ್ತಿರ ಹೋಗಿ) ಏಯ್ ಚಲಾಕಿ, ನಾನು ಈ ಕಡೆ ಸ್ವಲ್ಪ ಹೋಗಿ ಬರ್‍ತೇನೆ, ನೀ ಇಲ್ಲೇ ಇರು... ಹಸಿವಾಗತ್ತೆ ಅಲ್ವಾ ? ನಿಂಗೆ ತಿನ್ನೋಕೆ ತಿಂಡಿ ತರ್‍ತೇನೆ....ಬೇಗ ಬಂದು ಬಿಡ್ತೇನೆ...ಇಲ್ಲೇ ಮಲಕ್ಕೊಂಡಿರು. ಬೇಗ ಬರ್‍ತೇನೆ....ಹೆದರಿಕೆ ಆಗತ್ತಾ ?

ಹುಡುಗಿ : ಹೆದರಿಕೆ ಯಾಕೆ ?

ಕಳ್ಳ : ಅದೇ ಹೇಳಿದ್ದು. ಇಲ್ನೋಡು, ಇಲ್ನೊಬ್ಬ ಅಜ್ಜ ಇದಾನೆ. ಹ್ಯಾಗೆ ನಿಂತಿದಾನೆ ನೋಡು, ಕೋಲು ಹಿಡಕೊಂಡು !... ಈ ಪೋಸ್ಟ್ ಡಬ್ಬಿ ಕೆಂಪಣ್ಣ, ಈ ಟೆಲಿಫೋನ್ ಕಂಬದ ಆಕಾಶರಾಯ, ಈ ಕೊಂಬೆ ಕೈ ಎತ್ಕೊಂಡಿರೋ ಮರ ಮುತ್ತಜ್ಜ,...ಮತ್ತೆ ಇಕಾ ಈ ವೋಟು ಗೋಡೆ ಪೋಸ್ಟರಿನ ನಾಚ್‌ವಾಲೀ—ಇವರೆಲ್ಲಾ ಇದಾರಲ್ಲ,....ನಾ ಬೇಗ ಬಂದ್ಬಿಡ್ತೇನೆ.

ಹುಡುಗಿ : ಆಗಲಿ ಮಾವ....ಮತ್ತೆ ಈ ಟೋಫನ್ ಗಡ್ಡ ಮಿೂಸೆ ಎಲ್ಲ ಕಟ್ಕೋ ಬೇಡ. ಇನ್ನು ಯಾವಾಗ್ಲೂ ಹಾಕ್ಕೊಬೇಡ, ಇವನ್ನ. ನಿಂಗೆ ಅವು ಚಂದ ಕಾಣೋಲ್ಲ. ಆಯ್ತಾ ಮಾವ ?

ಕಳ್ಳ : ಆಯ್ತು ಮರಿ....ಬಾ, ಇಲ್ಲಿ ಕೂತಿರು. ಟವಲ್ ಹಾಸಿಕೊಡ್ತೇನೆ....ಈ ಗಂಟು ಇಲ್ಲೇ ಇರಲಿ. ನಿದ್ದೆ ಬಂದ್ರೆ ಇಲ್ಲೇ ಮಲಕ್ಕೋ....ಬೇಗ ಬಂದುಬಿಡ್ತೇನೆ....ನಾ ಬರೋತನಕ ಎಲ್ಲೂ ಹೋಗಬಾರದು ತಿಳೀತಾ?

ಹುಡುಗಿ : ಹುಂ.

ಕಳ್ಳ : (ಪ್ರೇಕ್ಷಕರಿಗೆ) ಒಳ್ಳೆ ವಿಚಿತ್ರ ಹುಡುಗಿ ! ಏನಂತೀರಿ ?........ ಹೆದರಿಕೆ ಅನ್ನೋದೇ ಇಲ್ವಲ್ಲ ಇವಳೀಗೆ !.......ಬೇಗ ಹೋಗಿ ಅವಳಿಗೂ ಇಷ್ಟು ತಿಂಡಿ ತಗೊಂಡು ಬೇಗ ಬಂದು ಬಿಡ್ತೇನೆ...

ಕಳ್ಳ ಹೋಗುತ್ತಾನೆ. ಹುಡುಗಿ ಮೆಲ್ಲಗೆ ಎದ್ದು ಅಲ್ಲೇ ಆಚೀಚೆ ನೋಡಿ ಪೋಸ್ಟ್ ಡಬ್ಬಿ ಹತ್ತರ ಹೋಗಿ, 'ಕೆಂಪಣ್ಣಾ ಕೆಂಪಣ್ಣಾ' ಎಂದು ಅದನ್ನು ಮಾತನಾಡಿಸಲು ಯತ್ನಿಸಿ. ಅನಂತರ ಮುದುಕನ ಹತ್ತಿರ ಬಂದು—

ಹುಡುಗಿ : ಅಜ್ಜಾ, ಅಜ್ಜಾ......

ಮುದುಕನ ಪ್ರತಿಮೆ ಕೊಂಚ ಚಲಿಸುವುದು.

ಹುಡುಗಿ : ಅಜ್ಜಾ, ಆ ನಿನ್ನ ಕೋಲು ಕೊಡ್ತೀಯಾ ?

ಮುದುಕ : (ಮೆಲ್ಲಗೆ ಕೋಲು ಹಿಡಿದು ಕೆಳಗೆ ಬರುತ್ತ) ನಂಗೆ ಬೇಕಲ್ಲಮ್ಮಾ. ಅದಿಲ್ಲದೆ ನಂಗೆ ನಡೆಯೋಕೆ ಆಗೋಲ್ಲ. ನಿಂಗೆ ಯಾಕೆ ಕೋಲು ?

ಹುಡುಗಿ : ಕುದುರೆ ಮಾಡೋಕೆ. ಈಗ ಮಾವ ಬರ್ತಾನೆ, ಆಮೇಲೆ ನಾವಿಬ್ರೂ

ಹೋಗ್ಬೇಕಲ್ಲ. ಕುದುರೆ ಹತ್ತಿ ಹೋಗಬಹುದು......

ಮುದುಕ : ನಂಗೆ ಕೋಲು ಇಲ್ದೆ ನಡೆಯೋಕೇ ಆಗೋಲ್ಲ.......

ಹುಡುಗಿ : ಹಾಗಾದ್ರೆ ಬೇಡ..........ಅಜ್ಜ, ಆ ನಾಚ್‌ವಾಲಿ ಎಷ್ಟು ಚೆಂದ ಇದಾಳಲ್ಲ. ಅವಳನ್ನ ಮಾತಾಡಿಸ್ತೇನೆ....... ನಾಚ್‌ವಾಲೀ....... ನಾಚ್‌ವಾಲೀ........

ಕೂಗುತ್ತಾ ಅದರ ಕಡೆ ಹೋಗುತ್ತಾಳೆ. ಮುದುಕ ಕೋಲೂರಿ ಮುಂದೆ ಬಂದು ಪ್ರೇಕ್ಷಕರ ಎದುರು ನಿಲ್ಲುತ್ತಾನೆ.

ಮುದುಕ : ಇದೊಳ್ಳೇ ವಿಚಿತ್ರ, ಆಂ ?.... ಈ ಹುಡುಗಿ ಹೊತ್ತುಕೊಂಡು ಅವನು ಅಷ್ಟು ದೂರದಲ್ಲಿ ಬರ್ತಾ ಇರೋವಾಗ್ಲೇ ನಂಗೆ ಅನುಮಾನ ಬಂತು.... ಹೂಂ !...ಏನ್ ಮಾಡಲಿ ಎಲ್ಲಿ ಅಡಗಲಿ ಅಂತ ಯೋಚಿಸೋದ್ರಲ್ಲಿ ಬಂದೇಬಿಟ್ಟ ! ಆಚೆ ಓಡೋಣ ಅಂದ್ರೆ, ಹಾಳು ವಾತ, ವಯಸ್ಸಾದ್ದು ನೋಡಿ—ಸೊಂಟದ ಕೀಲು ಹಿಡಕೊಂಡು ಬಿಡ್ತು. ಹೂಂ !........ ಆಗಿದ್ದಾಗಲಿ ಅಂತ ಕಲ್ಲಿನ ಹಾಗೆ ನಿಂತೇಬಿಟ್ಟೆ ! ಅಲ್ಲ ಇದೆಲ್ಲ ಏನೋ ಒಂಥರಾ ಒಗಟಾಯ್ತಲ್ಲ ಅಂತೇನೆ, ಊಂ ?......ಅಂವ ತಾನು ಕಳ್ಳ ಅಂತಾನೆ ! ಸುಳ್ಳಿನ ಮೇಲೆ ಸುಳ್ಳು ಕಟ್ಟಿ ಒಗೀತಾನೆ...ಯಾವನಾದ್ರೂ ಕಳ್ಳ, ತಾನು ಕಳ್ಳ ಅಂತ ಹೀಗೆ ಹೇಳಿಕೋತಾನಾ ?.... ಈ ಪೋರಿ ಅವನನ್ನ ಮಾವ ಅಂತಾಳೆ. ಅವನ ಗಡ್ಡ ಮೀಸೆ ಕಿತ್ತು ಒಗೀತಾಳೆ.... ಹುಂ ! .... ಅಲ್ಲ, ಈಗ ಏನು ಮಾಡಲಿ ?....ಅಂವ ಕಳ್ಳನೇ ಆದ್ರೆ, ಹ್ಯಾಗಾದ್ರೂ ಈ ಹುಡುಗಿ ಬಚಾವ್ ಮಾಡ್ಬೇಕು...ಆದ್ರೆ, ಅಷ್ಟರಲ್ಲಿ ಅವನೇ ಬಂದುಬಿಟ್ರೆ ?.... ಈ ಸೊಂಟದ ಕೀಲು ಬೇರೆ....ನಂಗೆ ಓಡೋಕೂ ಆಗೋಲ್ಲ !.....ಊಂ ! ..,.....ಇರಲಿ; ನಾ ಇಲ್ಲೇ ಎಲ್ಲಾದ್ರೂ ಸ್ವಲ್ಪ ಮರೇಲಿ ಅಡಗಿಕೊಂಡು....ಊಹುಂ....ಅಡ ಗೋದು ಯಾಕೆ, ನಿಮ್ಮ ಜತೆ ಬಂದು ಕೂತುಬಿಟ್ಟರೆ ಆಯ್ತಲ್ಲ...ಹುಂ!

ಮುದುಕ ಕೆಳಗಿಳಿದು ಬಂದು ಪ್ರೇಕ್ಷಕರ ಜೊತೆಗೇ ಕೂರುತ್ತಾನೆ.

ಹುಡುಗಿ : (ಪೋಸ್ಟರ್ ಕಡೆಯಿಂದ ಈಚೆ ಬರುತ್ತ) ಅಜ್ಜಾ, ಆ ನಾಚ್‌ವಾಲೀಗೆ ಜಂಭ, ಮಾತೇ ಆಡೋಲ್ಲ !.......(ಮುದುಕ ಕಾಣದೆ) ಅಜ್ಜಾ.......

ಅಜ್ಜಾ....ಎಲ್ಲಿ ಹೋದ?....ನಾನು ಕೋಲು ಕೇಳಿದೆ ಅಂತ ಸಿಟ್ಟು ಬಂತಾ ?....ಅಜ್ಜಾ. ಅಜ್ಜಾ...ಥು, ಮಾತಾಡೋಕೂ ಯಾರೂ ಇಲ್ಲ ....(ಹಿಂದೆ ಹೋಗಿ ಒಂದೊಂದನ್ನೇ ಮಾತನಾಡಿಸಲು ಯತ್ನಿಸುತ್ತ) ಓ ಕೆಂಪಣ್ಣಾ, ಕೆಂಪಣ್ಣಾ....ಆಕಾಶರಾಯ್ರೆ, ಆಕಾಶರಾಯ್ರೆ....'ಮರ ಮುತ್ತಜ್ಜ, ಮರ ಮುತ್ತಜ್ಜ.... ಯಾಕೋ ಯಾರೂ ಮಾತೇ ಆಡೋಲ್ಲ....ಹೋಗಲಿ, ಮಾವ ಹೇಳಿದ್ಹಾಗೆ, ಅವನು ಬರೋ ತನಕ ಇಲ್ಲಿ ಮಲಕ್ಕೊಂಡು ಬಿಡ್ತೇನೆ....

ಮಲಗುತ್ತಾಳೆ. ಪ್ರಕಾಶ ಪಲ್ಲಟ. ಕ್ರಮೇಣ, ಟೆಲಿಫೋನ್ ಕಂಬ ಮೆಲ್ಲಗೆ ತಂತಿ ಮಿಡಿಯತೊಡಗುತ್ತದೆ. ಉತ್ತರಿಸುವಂತೆ ಪೋಸ್ಟ್ ಡಬ್ಬಿ ಒಂದೊಂದೇ ಪೆಟ್ಟು ಬಾರಿಸತೊಡಗುತ್ತದೆ. ಮರ ಸ್ವರ ಎತ್ತುತ್ತದೆ. ಎಲ್ಲವೂ ಒಂದೊಂದೇ ಹುಡುಗಿಯ ಹತ್ತಿರಕ್ಕೆ ಬಂದು ಆಕೆಯ ಬದಿಯಲ್ಲಿ ನಿಂತು ನೋಡುತ್ತವೆ ; ಪರಸ್ಪರ ಒಟ್ಟಾಗಿ ಒಂದಕ್ಕೊಂದು ಮರುಕದಿಂದ ಸ್ವರ-ಆಲಾಪಗಳಲ್ಲೇ ಮಾತಾಡಿಕೊಳ್ಳುತ್ತವೆ. ಮರ ಹುಡುಗಿಯ ಮೇಲೆ ಟವೆಲ್ ಹೊದೆಸುತ್ತದೆ... ಅನಂತರ ಎಲ್ಲ ತಮ್ಮ ತಮ್ಮ ಜಾಗೆಕ್ಕೆ ಹೋಗಿ ನಿಲ್ಲುತ್ತವೆ. ಆಮೇಲೆ—

ಮೂರೂ : (ಹಾಡು)

ಬೆಟ್ಟಕ್ಕೆ ಚಳಿಯಾದರೇನ ಹೊದೆಸುವರು....
ಬಯಲು ಬತ್ತಲಾದರೇನ ತೊಡಿಸುವರು.... ಇತ್ಯಾದಿ.

ಹಾಡು ಮುಗಿದು ದನಿ ಕರಗುತ್ತಿದ್ದಂತೆ—ನಾಚ್‌ವಾಲಿಯ ಗೆಜ್ಜೆ ಸದ್ದು ಪ್ರಾರಂಭವಾಗುತ್ತದೆ. ಮೂವರೂ ಆ ಕಡೆ ನೋಡುತ್ತಾರೆ.

ನಾಚ್ : ಏಯ್ ಕೆಂಪಣ್ಣ, ಮರಪ್ಪ, ಆಕಾಶರಾಯ—ನೀವೆಲ್ಲ ಹೀಗೇ ಹಾಡ್ತಾ ಕೂತು ಬಿಡಿ ; ನಾನು ನಾಚ್ ಮಾಡ್ತೇನೆ—ಈ ಪುಟ್ಟ ಹುಡುಗಿ ಪಾಪ....

ಪೋ. ಡಬ್ಬ : ಪಾಪ ಪಾಪ ಪಾಪ !

ಟೆ. ಕಂಬ : ಪಾಪ ಪಾಪ ಪಾಪ !...

ಮರ : ಪಾಪ ಪಾಪ ಪಾಪ...

ನಾಚ್ : ಇನ್ನೇನ್ ಕಳ್ಳ ಬಂದು ಬಿಡ್ತಾನೆ. ಈ ಹುಡುಗಿ ಬಚಾವ್ ಮಾಡೋದು ಬೇಡವಾ ?

ಪೋ. ಡಬ್ಬ : ಮಾಡ್ಬೇಕು, ಮಾಡ್ಲೇಬೇಕು.

ಟೆ. ಕಂಬ : ಮಾಡ್ಲೇಬೇಕು...

ಮರ : –ಡ್ಲೇ ಬೇಕು...

ನಾಚ್ : ಮಾಡ್ಲೇಬೇಕು ಅಂದ್ರೆ ಆಯ್ತಾ ? ಹ್ಯಾಗ ಬಚಾವ್ ಮಾಡೋದು?

ಪೋ. ಡಬ್ಬ : ಬಚಾವ್ ಮಾಡೋದು ಹ್ಯಾಗೆ ?

ಟೆ. ಕಂಬ : ಮಾಡೋದ್ ಹೇಗೆ ?

ಮರ : ಹೇಗೆ ?...

ನಾಚ್ : ಹೇಗೆ ಅಂದ್ರೆ !...ಯೋಚ್ನೆ ಮಾಡ್ಬೇಕು.

ಪೋ. ಡಬ್ಬ : ನಂಗೆ ಏನೂ ಹೊಳೆಯೋದೇ ಇಲ್ಲ—ಊರಲ್ಲಿ ಯಾರದೋ ಶ್ರೀಮಂತರ ಮಗಳ ಮದುವೇನಂತೆ. ಒಂದು ರಾಶಿ ಇನ್‌ವಿಟೇಶನ್ ಕಾಗದ ತಂದು ತುಂಬಿ ಬಿಟ್ಟಿದಾರೆ, ಹೊಟ್ಟೆ ಒಡೆದು ಹೋಗೋ ಹಾಗೆ. ಈ ಭಾರ ಹೊತ್ಕೊಂಡು ತಲೇಲಿ ಏನು ಯೋಚನೆ ಮಾಡೋಕೆ ಸಾಧ್ಯ ?

ಟೆ. ಕಂಬ : ನನ್ನ ಕತೆ ಕೇಳಿ. ನಾಲ್ಕು ದಿನದಿಂದ ಅದೇನು ಮೆಸೇಜುಗಳು ಓಡ್ತಾ ಇವೆ ಅಂದ್ರೆ ಲೆಕ್ಕಾನೇ ಇಲ್ಲ. ತಲೇಲಿ ಒಂದೇ ಸಮ ಗುಂಯ್ ಅಂತ ಓಡ್ತಾನೇ ಇರುತ್ವೆ.

ಮರ : ನನ್ನ ತಲೇ ತುಂಬ ಗುಬ್ಬಚ್ಚಿ ಗೂಡು ಕಟ್ಟಿ ಯಾವಾಗ್ಲೂ ಕಚಾಪಚಾ ಅಂತ ಕಿರುಚುತ್ತಲೇ ಇರ್ತವೆ ! ಏನು ಯೋಚನೆ ಮಾಡ್ಲಿ ?—ಆದ್ರೂ ಪಾಪ, ಈ ಪುಟ್ಟ ಹುಡುಗಿ—

ಪೋ. ಡಬ್ಬ : ಪಾಪ, ಪುಟ್ಟ ಹುಡುಗಿ....

ಕೋಚ ಹೊತ್ತು ಎಲ್ಲವೂ ಯೋಚಿಸುವಂತೆ ಕಾಣುತ್ತದೆ.

ಟೆ. ಕಂಬ : (ಒಮ್ಮೆ ತಟ್ಟನೆ ತಂತಿ ಮಿಟುತ್ತದೆ)

ಮರ : ಹೊಳೀತು ! ಹೊಳೀತು !

ಪೋ. ಡಬ್ಬ : ಏನ್ ಹೋಳೀತು !

ಮರ : (ರಾಗವಾಗಿ) ಹೊಳೀತು....ಹೊಳೀತು...

ಟೆಲಿ. ಕಂಬ ತಂತಿ ಮಿಟತೊಡಗುತ್ತದೆ;

ಪ್ರೊ. ಡಬ್ಬ ಖಂಜರ ಬಾರಿಸ ತೊಡಗುತ್ತದೆ ;
ನಾಚ್‌ವಾಲಿ ಗೆಜ್ಜೆ ಝಣಗುಡಿಸುತ್ತಾಳೆ.

ಮರ : (ಮೈ ಕುಲುಕುತ್ತ ಹೊಳೆದದ್ದನ್ನು ಉಳಿದವಕ್ಕೆ ತಿಳಿಸಿ ಹೇಳುವಂತೆ— ಸಂಗೀತ ಸ್ವರದಲ್ಲಿ)
ಸಮ ಸಮ ಪಧಧಾ । ಪನೀ ನೀದ ಧನಿಧಪ ಮಾ ॥

ಎಲ್ಲರೂ : (ಅರ್ಥಮಾಡಿಕೊಳ್ಳುವಂತೆ ಅದೇ ಸ್ವರಗಳನ್ನು ಪುನರಾವರ್ತಿಸುತ್ತವೆ.)

ಮರ : (ಮುಂದುವರಿಸಿ ಹೇಳುವಂತೆ)
ಮನಿಧಸ ಧಧಸಾ । ನೀದ ನೀ ಪ ಧನಿಧಪ ಮಾ ।
ಮನಿಧಸ ಧಧಸಾ ॥ ಸಾ–ಸಾ–ಸನಿಧಪಮಾ ।
ಮನಿಧಸ ಧಧಸಾ । ಮ–ಸ–ಮ–ಸ–ದನಿಧಪಮಾ ॥

ಎಲ್ಲರೂ : (ಒಟ್ಟಾಗಿ ಸ್ವರಗಳನ್ನು ಕೂಡಿಸಿ ಹಾಡತೊಡಗುತ್ತವೆ.)

ಹಾಡು ಮುಗಿಯುತ್ತಿರುವಂತೆ—

ಟೆ. ಕಂಬ : ಅಕೋ ಅಲ್ನೋಡಿ...

ಮರ : ಓ ಕಳ್ಳ ಬರ‍್ತಿದಾನೆ...

ಪ್ರೋ. ಡಬ್ಬ : ಬಂದೇಬಿಟ್ಟ !

ಕಳ್ಳ ಪ್ರವೇಶಿಸುತ್ತಾನೆ. ತಟ್ಟನೆ ಮರ, ಟೆಲಿಕಂಬ, ಪ್ರೋ. ಡಬ್ಬ ಹಾಡಲು ಪ್ರಾರಂಭಿಸುತ್ತವೆ. ನಾಚ್‌ವಾಲಿ ಗೆಜ್ಜೆ ಸದ್ದು ಮಾಡುತ್ತಾಳೆ. ಕಳ್ಳ ಆಶ್ಚರ್ಯದಿಂದ ಆಚೀಚೆ ನೋಡುತ್ತಿರಲು, ಎಲ್ಲವೂ ಕೂಡಿ, ಸ್ವರ ಹಾಡಿಕೊಳ್ಳುತ್ತ, ನೃತ್ಯದ ಬೆಡಗಿನಿಂದ ಚಲಿಸಿ ಆತನನ್ನು ಅಟ್ಟಿ ಓಡಿಸತೊಡಗುತ್ತವೆ.

ಕಳ್ಳ : (ಹೆದರಿ ಆಚೀಚೆ ಓಡಿ, ಆಮೇಲೆ ಪ್ರೇಕ್ಷಕರಿಗೆ ಎದುರಾಗಿ) ದೇವ್ರೇ, ಇದೇನು ಬಂತಪ್ಪಾ ! ನಾನು ಆಗ ಹೇಳಿದ ಹಾಗೆ ಗ್ರಹಚಾರದ ಪೋರಿ ಇದು ! ಎಲ್ಲಾ ಬಿಟ್ಟು ಈ ಹುಡುಗೀನೇ ಹೊತ್ಕೊಂಡು ಬಂದೆನಲ್ಲ ! ...ಯಾವ್ದೋ ಅದ್ಭುತಶಕ್ತಿ ಇರಬೇಕು ಈ ಚೋಕ್ರಿ ಹತ್ತಿರ.....ಈಗ ಹೇಗಾದ್ರೂ ನನ್ನ ಬಚಾವು ಮಾಡಿಕೊಂಡ್ರೆ ಸಾಕು...ಇನ್ನೇನಿಲ್ಲ, ಕಾಲಿಗೆ ಬುದ್ಧಿ ಹೇಳೋದೆ....

ಓಡುವನು.

ಹಾಡು ಕ್ಷಯಿಸಿದಂತೆ, ಎಲ್ಲವೂ ತಮ್ಮ ತಮ್ಮ ಸ್ಥಾನಗಳಲ್ಲಿ ಯಥಾವತ್ ಸ್ಥಿರಗೊಂಡು ನಿಲ್ಲವುದಕ್ಕೂ ಬೆಳಕು ಕ್ಷಯಿಸಿ ಕತ್ತಲು ಆವರಿಸುತ್ತದೆ. ಅನಂತರ—ಕ್ರಮೇಣ ಸೂರ್ಯೋದಯವಾಗುವಂತೆ ಬೆಳಕು. ಬೆಳಗು ಮುಂಚಿನ ಸದ್ದುಗಳು. ಹುಡುಗಿ ಹಿಂಭಾಗದ ದಿಬ್ಬದ ಮೇಲಿದ್ದಾಳೆ. ಮುದುಕ ಪ್ರೇಕ್ಷಕರ ಕಡೆ ಬಂದು ಎದುರು ನಿಲ್ಲುತ್ತಾನೆ.

ಮುದುಕ : ನೆನ್ನೆ ರಾತ್ರಿ ನಿಮ್ಮ ಜತೇನೇ ಕೂತು, ಇಲ್ಲಿ ಏನೇನು ಅದ್ಭುತ ನಡೀತೋ ಎಲ್ಲಾ ನೋಡಿದೆ....ನಾನು ಮೇಷ್ಟ್ರು. ರಿಟೈರಾಗಿ ಹತ್ತು ಹದಿನೈದು ವರ್ಷ ಆಯ್ತು ; ಈಗ ಊರಲ್ಲಿ ಒಂದು ಪಳೆಯುಳಿಕೆ ಹಾಗೆ ಉಳಿದುಕೊಂಡಿದೇನೆ—ಆ ಮಾತು ಬಿಡಿ....ನಂಗೆ ಗೊತ್ತು, ಈ ಪ್ರಪಂಚ ನಿಜವಾಗಿ ಜೀವಂತ ಆಗೋದು ಮಕ್ಕಳ ಸನ್ನಿಧೀಲಿ ಮಾತ್ರ ಅನ್ನೋದು. ಮಕ್ಕಳ ಹತ್ತಿರ ಪೋಸ್ಟ್ ಡಬ್ಬೀನೂ ಮಾತಾಡುತ್ತೆ ಅಂತ ಯಾರಾದ್ರೂ ಹೇಳಿದ್ರೆ, ನಾನು ಸಂದೇಹ ಇಲ್ಲದೇನೇ ನಂಬತಿದ್ದೆ. ಆದ್ರೆ, ಅದನ್ನೇ ಇವೇ ಕಣ್ಣಲ್ಲಿ ಕಂಡಾಗ ಮಾತ್ರ, ನಂಗೂ ಆಶ್ಚರ್ಯ ಆಗಿ ಬಿಡ್ತು, ನಿಮ್ಮ ಹಾಗೇ....ಕಳ್ಳ ಕಾಲಿಗೆ ಬುದ್ದಿ ಹೇಳಿದ—ನೀವು ನೋಡಿದ್ರಿ....ಪಾಪ ಮಗು ಹಸಗೊಂಡೇ ಇತ್ತಲ್ಲ, ಈಗ ಬೆಳಿಗ್ಗೆ ಒಂದಿಷ್ಟು ತಿಂಡಿ ತಂದ್ಕೊಟ್ಟೆ....ಇಷ್ಟೊತ್ತಿನ ತನಕ ಹೇಳಿದೆ—ನಿನ್ನ ಮಾವ ಭಾರೀ ಕಳ್ಳ, ಅವನು ರಾತ್ರಿ ಓಡಿ ಹೋದ, ಇನ್ನು ಬರೋದಿಲ್ಲ, ಬಾ ನಮ್ಮ ಮನೇಗೆ ಹೋಗೋಣ, ಅಲ್ಲಿಂದ ನಿನ್ನನ್ನ ಮನೆಗೆ ಕಳಿಸ್ತೇನೆ ಅಂತ....ಏನು ಹೇಳಿದ್ರೂ ಒಪ್ಪೋದಿಲ್ಲ...ಆಂ....

ಹುಡುಗಿ : (ಮುಂದೆ ಬರುತ್ತ) ಅಜ್ಜಾ, ಮಾವ ಬಂದ ಕೂಡ್ಲೇ ನಾವು ಹೊರಟು ಬಿಡ್ತೀವಿ. ನಮ್ಮ ಮೇಡಂ ಹೇಳಿದ್ರು, ಭೂಮಿ ಕಿತ್ತಳೆ ಹಣ್ಣಿನ ಹಾಗೆ ಗುಂಡಾಗಿದೆಯಂತೆ, ಕಿತ್ತಳೆ ಹಣ್ಣಿನ ಮೇಲೆ ಇರುವೆ ಬಿಟ್ಟರೆ ಅದು ಸುತ್ತಿ ಸುತ್ತಿ ಇದ್ದ ಜಾಗಕ್ಕೇ ಬರುತ್ತಲ್ಲ ಹಾಗೆ, ನಾವೂ ಭೂಮಿ ಸುತ್ತಿ ಇರೋ ಜಾಗಕ್ಕೇ ಬರಬಹುದಂತೆ. ಹಾಗೆ ಮಾವ ನಾನು ಇಡೀ ಭೂಮಿ ಸುತ್ತಿ ಬರ್ತೀವೆ.

ಮುದುಕ : ನಾ ಹೇಳಿದ್ನಲ್ಲ ಮಗು, ಅವನು ಮಾವ ಅಲ್ಲ, ಕಳ್ಳ, ಡಾಕು.

ಹುಡುಗಿ : (ನಕ್ಕು) ಅಲ್ಲ ಅಜ್ಜ. ಅವನು ಸಿನಿಮಾ ಮಾಡೋಕಾಗಿ ಗಡ್ಡ ಮೀಸೆ ಕಟ್ಕೊಂಡು ಡಾಕು ಮಾವ ಆಗಿದ್ದು, ಅಷ್ಟೆ.

ಮುದುಕ : ನಾ ಹೇಳಿದ್ದು ಕೇಳು, ಅವನು ಬರೋದಿಲ್ಲ.

ಹುಡುಗಿ : ಬಂದೇ ಬರ್‍ತಾನೆ, ಅಜ್ಜ. ಇಲ್ಲೇ ಇರು ಬರ್‍ತೀನಿ, ಎಲ್ಲೂ ಹೋಗ್ಬೇಡ ಅಂತ ಹೇಳಿ ಹೋಗಿದಾನೆ ...ಸಿನೆಮಾದಲ್ಲೂ ಹಾಗೇ—ಕಳ್ಳ ಓಡಿ ಹೋದ ಓಡಿಹೋದ ಅಂತಿದ್ರು. ಅವನು ಮತ್ತೆ ಕುದುರೆ ಹತ್ತಿ ಕೊಂಡು ಬಂದುಬಿಟ್ಟ !....ನಿನ್ನ ಹತ್ತಿರ ಕುದುರೆ ಇಲ್ವಾ ಅಜ್ಜ ?

ಮುದುಕ : ಇಲ್ಲ ಮಗು. ನನ್ನ ಹತ್ತಿರ ಈ ಕೋಲೇ ಇರೋದು.

ಹುಡುಗಿ : ಪಾಪ, ಕೋಲು ನಂಗೆ ಬೇಡ ಅಜ್ಜ, ನೀ ಇಟ್ಕೋ. ಮಾವ ಹೇಗೂ ಕುದುರೆ ತಗೊಂಡು ಬರ್‍ತಾನೆ.

ಅಷ್ಟರಲ್ಲಿ ಒಳಗಿನಿಂದ ಶಾಲೆಗೆ ಹೋಗುವ ಮಕ್ಕಳ ಗುಂಪು ಸಾಲಾಗಿ ಹಾಡು ಹೇಳಿಕೊಂಡು ಕವಾಯಿತಿನಲ್ಲಿ ಬರುತ್ತವೆ.

(ಹಾಡು) LEFT RIGHT LEFT RIGHT
DISCIPLINE DAY AND NIGHT.........
TWICE THE FOUR WILL MAKE IT EIGHT
DISCIPLINE DAY AND NIGHT.........ಇತ್ಯಾದಿ.

ಹುಡುಗಿ : (ಅವರನ್ನು ತಡೆದು) ಮಿಲ್ಟ್ರಿಗೆ ಹೋಗ್ತಿದೀರಾ ?

೧ ಹುಡುಗ : ಅಲ್ಲ ಅಲ್ಲ....

ಎಲ್ಲರೂ : ಅಲ್ಲ ಅಲ್ಲ...

೧ ಹುಡುಗ : ಶಾಲೆಗ್ಹೋಗೋ ಮಕ್ಕಳು ನಾವು

ಎಲ್ಲರೂ : ಮಕ್ಕಳು ನಾವು ಮಕ್ಕಳು ನಾವು

೧ ಹುಡುಗ : ಶಾಲೆಗೆ ಹೋಗೋ ಬಾಲಕರೀಗೆ

ಎಲ್ಲರೂ : ಶಿಸ್ತು ಬೇಕು ಶಿಸ್ತು ಬೇಕು !

ಹುಡುಗಿ : (ಕುಂಟುವ ಒಬ್ಬ ಹುಡುಗನನ್ನು ನೋಡಿ) ನಿಂಗೆ ಕಾಲು ಏನಾಗಿದೆ ?

೨ ಹುಡುಗ : ಮುಳ್ಳು ತಾಕಿದೆ.

ಹುಡುಗಿ : ಇಲ್ಲಿ ಬಾ. ನನ್ನ ಹತ್ತಿರ ಪಿನ್ ಇದೆ. ಮುಳ್ಳು ತೆಗೆಯೋಣ .

೨ ಹುಡುಗ : ಇಲ್ಲ, ಶಾಲೆಗೆ ಹೊತ್ತಾಗತ್ತೆ.

೧ ಹುಡುಗ : ಶಾಲೆಗೆ ಹೋಗೋ ಬಾಲಕರೀಗೆ

ಎಲ್ಲರೂ : ಸಮಯ ಪ್ರಜ್ಞೆ ಇರಲೇಬೇಕು !

ಹುಡುಗಿ : ಹಾಡು ಚಂದ ಇದೆ !....ಬಾ ಇಲ್ಲಿ....

ಹುಡುಗನನ್ನು ಎಳೆದೊಯ್ದು ಕೂಡಿಸಿ ಮುಳ್ಳು ತೆಗೆಯುತ್ತಾಳೆ. ಹುಡುಗ ಹುಡುಗಿಯರೆಲ್ಲ ಚದುರಿ ನಿಂತು ಆಕೆಯನ್ನು ಪ್ರಶ್ನಿಸತೊಡಗುತ್ತಾರೆ.

ಒಂದು : ಯಾರು ನೀನು ?

ಎರಡು : ಇಲ್ಲಿ ಯಾವಾಗ ಬಂದೆ ?

ಮೂರು : ಒಬ್ಬಳೇ ಬಂದೆಯಾ ?

ನಾಲ್ಕು : ಯಾ ಊರು ?

ಹುಡುಗಿ : ನಮ್ಮ ಮನೆ ಒಂದು ನೂರು ಮೈಲಿ ದೂರ. ರಾತ್ರಿ ಮಲಗಿದ್ದೋಳನ್ನ ನಮ್ಮ ಮಾವ ಎತ್ತಿಕೊಂಡು ಬಂದ...ನೆನ್ನೆ ಸಂಜೆ ಇಲ್ಲಿ ಬಂದೆವು. ಮಾವ ಇಲ್ಲೇ ನಂಗೆ ತಿಂಡಿ ತರ್ತೀನೆ ಅಂತ ಹೋದ. ಇನ್ನೂ ಬರಲೇ ಇಲ್ಲ. ಬರ್ತೀನೆ, ಇಲ್ಲೇ ಇರು ಅಂತ ಹೇಳಿ ಹೋಗಿದಾನೆ....

ಒಂದು : ರಾತ್ರಿ ಒಬ್ಬಳೇ ಇದ್ಯಾ ?

ಎರಡು : ಹೆದರಿಕೆ ಆಗಲಿಲ್ವಾ ?

ಹುಡುಗಿ : ಹೆದರಿಕೆ ಯಾಕೆ ?....ಇಲ್ಲಿ, ಈ ಕೆಂಪಣ್ಣ ಇಲ್ವಾ ? ಆಕಾಶರಾಯ್ರು ಇದಾರೆ, ಈ ಮುತ್ತಜ್ಜ ಇದಾನೆ. ಅಲ್ಲಿ ನೋಡಿ, ನಾಚ್‌ವಾಲಿ ಇದಾಳೆ. ಅವಳಿಗೆ ಮಾತ್ರ ಜಂಭ !....ಆದ್ರೆ ಎಷ್ಟು ಚೆಂದ ನಾಚ್ ಮಾಡಿದಳು ಗೊತ್ತಾ ? ರಾತ್ರಿ ಈ ಮರಜ್ಜ ಹಾಡು ಹೇಳಿದ, ಕೆಂಪಣ್ಣ ಖಂಜರ ಬಾರಿಸಿದ, ಇವಳು ನಾಚ್ ಮಾಡಿದ್ಲು....

ಹುಡುಗರು ಆಶ್ಚರ್ಯದಿಂದ ನೋಡುತ್ತಾರೆ

ಒಂದು ಹೌದಾ ?

ಎರಡು : ನಿಜವಾ ?

ಹುಡುಗಿ : ಬೇಕಾದ್ರೆ ನೀವೂ ಬನ್ನಿ. ಇವತ್ತು ಸಂಜೆ, ನೋಡಬಹುದು.

ಒಂದು : ಸಂಜೆ ನಾವು ಮನೇಗೆ ಹೋಗ್ಬೇಕಲ್ಲ.

ಎರಡು : ಶಾಲೆ ಬಿಟ್ಟಕೂಡಲೇ ಮನೇಗೆ ಹೋಗ್ಬೇಕು.

ಮೂರು : ಸೀದಾ ಮನೇಗೆ ಹೋಗ್ಬೇಕು, ಹಾಗೆಲ್ಲ ಎಲ್ಲೆಲ್ಲೋ ಅಲೀಬಾರದು.

ನಾಲ್ಕು : ನೀ ಇಲ್ಲೇ ಇರ್‍ತೀಯಾ ?

ಐದು : ನಿಮ್ಮ ಮಾವ ಬರೋಲ್ವಾ ?

ಹುಡುಗಿ : ಬಂದ್ರೆ ಏನಾಯ್ತು ?....ನಾ ಮಾವನಿಗೆ ಹೇಳ್ತೇನೆ. ನೀವು ಬರೋದಾದ್ರೆ ಸಂಜೆ ಇಲ್ಲೇ ಇರ್‍ತೇನೆ.

ಒಂದು : ಬರ್‍ತೇವೆ,

ಎರಡು : ಬರ್‍ತೇವೆ. ಬರ್‍ತೇವೆ.

ಮೂರು : ಬಂದೇ ಬರ್‍ತೇವೆ.

ನಾಲ್ಕು ; ಮತ್ತೆ ನೀ ಇಲ್ಲೇ ಇರ್‍ಬೇಕು.

ಹುಡುಗಿ : ಹೋ...ಇದ್ದೇ ಇರ್‍ತೇನೆ. ಕಾಯ್ತಾ ಇರ್‍ತೇನೆ.

ಒಂದು : ರೈಟ್.

ಎಲ್ಲರೂ : ಸಂಜೆ ಬರ್‍ತೇವೆ. ಬಂದೇ ಬರ್‍ತೇವೆ.

ಪುನಃ ಎಲ್ಲರೂ ಒಟ್ಟಾಗಿ ಶಿಸ್ತಿನ ಹಾಡು ಹಾಡುತ್ತ ಮೊದಲಿನ ಹಾಗೇ ನಿಷ್ಕ್ರಮಿಸುತ್ತಾರೆ. ಹುಡುಗಿ ಅವರನ್ನೇ ನೋಡುತ್ತ ವಿಂಗ್ ಕಡೆ ಹೋಗುತ್ತಾಳೆ.

ಮುದುಕ : (ಪ್ರೇಕ್ಷಕರ ಎದುರು ಬಂದು) ಇವತ್ತು ಸಂಜೇನೂ ನೋಡೇಬಿಡ್ಬೇಕು —ಏನು ನಡೆಯುತ್ತೆ ಅಂತ....ಹೂಂ !...ಆದ್ರೆ, ಇವತ್ತು ಅಲ್ಲಿ ನಿಮ್ಮ ಜತೆ ಕೂರೋಲ್ಲ. ಇಲ್ಲೇ ಹತ್ತಿರದಲ್ಲೇ ಎಲ್ಲಾದ್ರೂ ಅಡಗಿ ನಿಂತ್ಕೊಂಡು ನೋಡ್ತೇನೆ..........ನಿಮಗೂ ಕುತೂಹಲ ಅಲ್ವಾ, ನೋಡ್ಬೇಕು ಅಂತ, ಆಂ ?...ಹೂಂ !.......ಸಂಜೆ ಎಷ್ಟು ಹೊತ್ತಿಗೆ ಆಗತ್ತೆ ಅಂತಿದೀರಾ ?....ಅಷ್ಟು ಆತುರಾನಾ ?...ನೋಡಿ, ಕುತೂಹಲ ಇತ್ತು ಅಂದ್ರೆ ಮನಸ್ಸು ಮಾಯಕ ಮಾಡಿಬಿಡತ್ತೆ ! ಹೂಂ !... ಒಂದು ಚಣದಲ್ಲಿ ಬೆಳಗಿನಿಂದ ಸಂಜೇಗೆ ಹಾರಿಬಿಡತ್ತೆ !....(ಒಂದು ಕ್ಷಣ ಮೌನ) ........ಸೂರ್ಯ ಆಕಾಶದಲ್ಲಿ ಜಳಕ್ಕಂತ ಕೆಳಕ್ಕೆ ಜಾರಿಕೊಂಡುಬಿಡ್ತಾನೆ. ಕಿರಣಗಳು ಕೆಂಪುಕೆಂಪಾಗಿ ಕುಣಿಯೋಕೆ ತೊಡಗತ್ವೆ...... ಸ್ಕೂಲ್‌ಗೆ ಹೋದ ಮಕ್ಕಳು ಹಿಂದಿರುಗಿ ಬಂದ್ಬಿಡತ್ವೆ....

ತೆರೆಯಲ್ಲಿ ಕವಾಯತು ಹಾಡು ಹೇಳಿಕೊಳ್ಳುತ್ತ ಈ ಕಡೆಗೇ ಬರುತ್ತಿರುವ ಹುಡುಗರ ಸದ್ದು. ಮುದುಕ ನಿಷ್ಕ್ರಮಿಸುತ್ತಿರುವಂತೆ, ಹುಡುಗಿಯ ಪ್ರವೇಶ.

ಹುಡುಗಿ : ಅಜ್ಜಾ ಅಜ್ಜಾ, ಹುಡುಗರು ಬಂದುಬಿಟ್ರು...

ಅಜ್ಜನನ್ನು ಕಾಣದ ಅವನಿಗಾಗಿ ಸುತ್ತ ನೋಡುತ್ತಿರುವಷ್ಟರಲ್ಲಿ ಮಕ್ಕಳ ಪ್ರವೇಶ—ಸಾಲು ಕವಾಯಿತಿನಲ್ಲಿ.

ಹುಡುಗರು : (ಚದುರಿ) ಬಂದೆವು !
ಬಂದುಬಿಟ್ಟೆವು !....
ಬಂದೇಬಿಟ್ಟೆವು !...

ಹುಡುಗಿ : ಬನ್ನಿ ಬನ್ನಿ.

ಹುಡುಗರು ಹರ್ಷೋತ್ಸಾಹದಿಂದ ಕುಣಿಯುತ್ತ ಜಿಗಿಯುತ್ತ ಹುಡುಗಿಯ ಸುತ್ತ ನಿಲ್ಲುವರು.

ಹುಡುಗ ೧ : ನಿನ್ನ ಹೆಸರೇನು ಹೇಳ್ಲೇ ಇಲ್ಲ.

ಹುಡುಗಿ : ಚಲಾಕಿ ಅಂತ.

ಹುಡುಗ ೨ : ಚಲಾಕಿ !

ಎಲ್ಲರೂ : ಚಲಾಕಿ ! ಚಲಾಕಿ !

ಹುಡುಗ ೩ : ಚಲಾಕಿ, ಬೇಗ ಮತ್ತೆ, ಮರಜ್ಜನೀಗೆ ಹಾಡು ಹೇಳೋಕೆ ಹೇಳು,

ಹುಡುಗ ೪ : ಕೆಂಪಣ್ಣಂಗೆ ಕಂಜರ ಬಾರಿಸೋಕೆ ಹೇಳು.

ಹುಡುಗ ೫ : ಆಕಾಶಮಾವನೀಗೆ ತಂತಿ ಮಿಟೋಕೆ ಹೇಳು.

ಹುಡುಗಿ : ಮರಜ್ಜಾ, ಮರಜ್ಜಾ.......ಕೆಂಪಣ್ಣಾ, ಕೆಂಪಣ್ಣಾ....
ಆಕಾಶಮಾವ, ಆಕಾಶಮಾವ... (ಒಂದೊಂದರ ಬುಡಕ್ಕೂ ಹೋಗಿ ಮತ್ತೆ ಮತ್ತೆ ಕೂಗಿ ಅವು ಯಾವುದೂ ಮಾತಾಡದಿರಲು ಹತಾಶಳಾಗುತ್ತಾಳೆ.) ಯಾರೂ ಮಾತೇ ಆಡೋಲ್ಲ !....

ಹುಡುಗ ೬ : ನೆನ್ನೆ ರಾತ್ರಿ ಮಾತಾಡಿದ್ದು ಹೌದಾ ?

ಹುಡುಗ ೧ : ಅಥವಾ ನೀ ಸುಳ್ಳು ಹೇಳಿದೆಯೋ ?

ಹುಡುಗ ೨ : ಸುಳ್ಳು ಯಾಕೆ ಹೇಳ್ತಾಳೆ ಪಾಪ !

ಹುಡುಗಿ : ಯಾಕೋ ಎಲ್ಲರಿಗೂ ಸಿಟ್ಟು ಬಂದಿದೆ ಅಂತ ಕಾಣತ್ತೆ !

ಹುಡುಗ ೩ : ಸಿಟ್ಟು ಬಂದಿದ್ಯಾ ?

ಹುಡುಗಿ ೪ : ಸಿಟ್ಟು ಯಾಕೆ ?
ಹುಡುಗಿ ೫ : ಇಲ್ಲಾ ನೀ ಸುಳ್ಳು ಹೇಳಿದೆಯೋ ?
ಹುಡುಗಿ ೬ : ಹೌದಾ, ಸುಳ್ಳು ಹೇಳಿದೆಯಾ ?
ಹುಡುಗಿ ೧ : ನಾ ಹೇಳಲಿಲ್ವಾ, ಇವಳು ಸುಳ್ಳು ಹೇಳ್ತಾಳೆ.
ಹುಡುಗಿ ೨ : ಹೌದು, ಇವಳೇ ಬೂಸಿ ಬಿಟ್ಟಿದ್ದು !
ಹುಡುಗಿ ೩ : ಸುಳ್ಳಿ ! ಸುಳ್ಳು ಹೇಳ್ತಾಳೆ !
ಹುಡುಗಿ ೪ : ಸುಳ್ಳಿ ಸುಳ್ಳಿ ! ಸುಳ್ಳು ಹೇಳ್ತಾಳೆ !...
ಎಲ್ಲರೂ : (ರಾಗ) ಸುಳ್ಳಿ ಸುಳ್ಳಿ, ಸುಳ್ಳು ಹೇಳ್ತಾಳೆ !....
ಸುಳ್ಳು ಹೇಳ್ತಾಳೆ ಸುಕನಾಸಿ
ಕೇಳಿದವನೇ ಬಿಕನಾಸಿ....ಇತ್ಯಾದಿ.

ಹುಡುಗರೆಲ್ಲ ಲೇವಡಿ ಮಾಡಿ ಸುತ್ತ ಕುಣಿಯುತ್ತಿರಲು ಹುಡುಗಿ ಬೇಸರಗೊಂಡು ಕೂರುತ್ತಾಳೆ. ಅವಳ ಕಣ್ಣಲ್ಲಿ ನೀರಾಡತೊಡಗಿದೆ. ಹುಡುಗರ ಕೋಲಾಹಲದ ನಡುವೆ ಇದ್ದಕ್ಕಿದ್ದಂತೆ ತಂತಿಯ ಝೇಂಕಾರ ಕೇಳತೊಡಗುತ್ತದೆ. ಹುಡುಗರೆಲ್ಲ ಸ್ತಬ್ಧರಾಗಿ ನಿಲ್ಲುತ್ತಾರೆ. ಈಗ ಟೆಲಿ. ಕಂಬ ತಂತಿ ಬಾರಿಸತೊಡಗಿದೆ. ಕ್ರಮೇಣ, ಫೊ. ಡಬ್ಬ ಖಂಜರ ಬಾರಿಸಲು ತೊಡಗುತ್ತದೆ; ಮರ ಆಲಾಪನೆ ತೊಡಗುತ್ತದೆ. ಹುಡುಗರೆಲ್ಲ ಹರ್ಷದಿಂದ ಕುಣಿಯತೊಡಗುತ್ತಾರೆ.

ಹುಡುಗಿ : ನಿಲ್ಲಿ ನಿಲ್ಲಿ. ಎಲ್ಲ ಸಾಲಾಗಿ ನಿಂತ್ಕೊಳ್ಳಿ. ನಾಚ್‌ವಾಲಿ ಡಾನ್ಸ್ ಮಾಡ್ತಾಳಂತೆ, ಗೆಜ್ಜೆ ಕುಣಿಸ್ತಿದಾಳೆ...ಏ ನಾಚ್‌ವಾಲಿ, ಹುಂ, ಶುರುಮಾಡು. ಇವರೀಗೆಲ್ಲ ನಿನ್ನ ಡಾನ್ಸ್ ನೋಡ್ಬೇಕಂತೆ. ಮತ್ತೆ ಜಂಬ ಮಾಡ್ಬೇಡ ! ....ಮರಜ್ಜ, ಒಂದು ತಿಲ್ಲಾನ ಹೇಳು, ನಾಚ್‌ವಾಲಿ ಡಾನ್ಸ್ ಮಾಡ್ತಾಳೆ....ಕೆಂಪಣ್ಣ, ಖಂಜರ...

ಮರ ತಿಲ್ಲಾನ ಹಾಡತೊಡಗುತ್ತದೆ. ಫೊ. ಡಬ್ಬ ಖಂಜರ ಬಾರಿಸುತ್ತದೆ. ನಾಚ್‌ವಾಲಿ ಕುಣಿಯುತ್ತಾಳೆ. ಮಕ್ಕಳೆಲ್ಲ ಹಿಗ್ಗಿ ಚಪ್ಪಾಳೆ ತಟ್ಟುತ್ತಾರೆ.

ಹುಡುಗಿ : ಹುಂ, ಈಗ ಎಲ್ಲಾ ರೌಂಡ್ ಆಗಿ ನಿಂತ್ಕೊಳ್ಳಿ. ಮರಜ್ಜ ಹಾಡು ಹೇಳಿಕೊಡ್ತಾನೆ. ನಾವೆಲ್ಲ ಹೇಳ್ಕೊಂಡು ಕುಣೀಬೇಕು .... ಹುಂ, ಮರಜ್ಜ, ನಾವು ರೆಡಿ !
ಮರ : (ಹಾಡು) ಖ್ಯಾಲ್ ವ್ಹಾರೆ ಖಯ್ಯಾಲಿ ವ್ಹಾ !

ಭಪ್ಪರೆ ಭೇಷಕ್ ಶಹಬ್ಬಾಸ್ ವ್ಹಾ !...
ಗಾಳಿ ಪರಿಮಳ ಸೂಸತಿರ್ಲೇ
ಚಂದ್ರ ಬೆಳ್ಳಿ ಹಾಸತಿರ್ಲೇ
ನಾವ್ ನಾವ್ ನಮ್ ನಮ್ ಪಾಡಿಗೆ ಹಾಡ್ಕೊಂತ್
ಕುಣೀತಾ ನಲೀತಾ ಇರ್ತೇವೆ....
ನಗ್ತಾ ಬರೋರ್ ಬರ್ತಿರ್ಲೇ
ಅಳ್ತಾ ಹೋಗೋರ್ ಹೋಗ್ತಿರ್ಲೇ
ನಾವ್ ನಾವ್ ನಮ್ ಪಾಡಿಗೆ ಹಾಡ್ಕೊಂತ್
ಕುಣೀತಾ ನಲೀತಾ ಇರ್ತೇವೆ....

ಇತ್ಯಾದಿ

ಕುಣಿತ ತಾರಕಕ್ಕೇರುತ್ತಿದ್ದಂತೆ ಮುದುಕನೂ ಬಂದು ಸೇರಿಕೊಳ್ಳುತ್ತಾನೆ. ಕ್ರಮೇಣ ಎಲ್ಲವೂ ಮಂದಗೊಳ್ಳುತ್ತ, ಮಕ್ಕಳೆಲ್ಲ ಅಲ್ಲಲ್ಲೇ ಒರಗಿ ನಿದ್ರಿಸ ತೊಡಗುತ್ತಾರೆ. ಮುದುಕ ಆಶ್ಚರ್ಯದಿಂದ ನಿಂತಿದ್ದಾನೆ. ದೀರ್ಘ ನೀರವ. ಅನಂತರ—ತೆರೆಯಲ್ಲಿ ಕಾರ್ ಸ್ಕೂಟರ್ ಮುಂತಾದ ವಾಹನಗಳ ಭೋರ್ಗರೆತ ; ಎತ್ತೆತ್ತಲಿಂದಲೋ ರಾಚಿದಂತೆ ರಂಗಕ್ಕೆ ಬಂದು ಬೀಳುವ ಹಾಯ್ ದೀಪಗಳ ಬೆಳಕು ಇತ್ಯಾದಿ.

ಮುದುಕ : ಓ, ಇದೇನಪ್ಪಾ ಇದು !.... ಇಡೀ ಊರೇ ಈಕಡೆ ದೌಡಾಯಿಸಿ ಬರ್‍ತಾ ಇದೆ !... ಪೋಲೀಸು ಜೀಪು !.... ಓ, ಹೂಂ ಹೂಂ ಹೂಂ !.... ಮಕ್ಕಳನ್ನ ಹುಡುಕ್ತಾ ಬರ್‍ತಿದಾರೆ !... ಮತ್ತೆ, ಈ ನಮ್ಮ ಹುಡುಗಿ ಸಿಕ್ಕಿಬಿಡ್ತಾಳಲ್ಲ !.... ಅವಳು ಪೋಲೀಸರ ಕೈಗೆ ಸಿಕ್ಕಿ... ಛೆ ಛೆ !... ಊಹುಂ....... ಯಾಕೆ ಇಲ್ಲದ ಉಪದ್ವ್ಯಾಪ...... ಇವಳನ್ನ ಮರೆ ಮಾಡೋದೇ ಒಳ್ಳೇದು....

ಹೇಗೋ ಕಷ್ಟದಿಂದ ಹುಡುಗಿಯನ್ನು ಹೊತ್ತು ಹಿಂಭಾಗಕ್ಕೆ ಒಯ್ದು ಮಲಗಿಸುತ್ತಾನೆ. ಪೋಲೀಸ್ ಅಧಿಕಾರಿಯ ಜೊತೆ ನಾಗರಿಕರು ಪ್ರವೇಶಿಸು ತ್ತಾರೆ.

ಒಂದು : ಹೌದಲ್ಲ, ಇಲ್ಲೇ ಮಲಗಿಬಿಟ್ಟಿವೆ.

ಎರಡು : ಎಲ್ಲ ಇಲ್ಲೇ ಇರೋಹಾಗಿದೆ.

ಮೂರು : ಎಲ್ಲ ಇದಾವೆ, ಸದ್ಯ.
ನಾಲ್ಕು : ಏನಾಗಿದೆ ಇವಕ್ಕೆ ?
ಐದು : ನೋಡಿ, ನೋಡಿ,...ಮೈಮುಟ್ಟಿ ನೋಡಿ....
ಆರು : (ಮೈ ಮುಟ್ಟಿ ಎಬ್ಬಿಸುತ್ತ) ಸದ್ಯ ಜೀವ ಅಂತೂ ಇದೆ !
ಒಂದು : ಅಲ್ಲ, ಯಾರೋ ಏನೋ ತಿನ್ನಿಸಿ...
ಎರಡು : ಏನೋ ಆಗಿದೆ ಬಿಡಿ, ಇಲ್ಲದಿದ್ರೆ...
ಮೂರು : ಯಾವತ್ತೂ ಡಿಸಿಪ್ಲಿನ್ ತಪ್ಪಿದ ಮಕ್ಕಳಲ್ಲ ಇವು....
ಒಂದು : (ಪೋಲಿಸ್ ಅಧಿಕಾರಿಗೆ) ನೋ ನೋ ! ನಮ್ಮ ಊರಲ್ಲಿ ಇಂಥಾದ್ದು ನಡೆಯೋದು ಅಂದ್ರೆ....ನೋ ! ನೀವು, I mean, ನಿಮ್ಮ ಡಿಪಾರ್ಟ್‌ಮೆಂಟ್....
ಪೋಲಿಸ್ : ಡಿಪಾರ್ಟ್‌ಮೆಂಟ್‌ಗೆ strict instructions ಕೊಟ್ಟು ಬಿಟ್ಟಿದ್ದೇನೆ. ಇನ್ನು ಹೀಗೆ ನಡೆಯೋಲ್ಲ....(ಪೇದೆಗಳಿಗೆ) ಹುಂ. ಮಕ್ಕಳನ್ನೆಲ್ಲ ಮೆಲ್ಲನೆ ಎತ್ತಿ ತಗೊಂಡು ಹೋಗಿ....ಜೀಪಿನಲ್ಲಿ ತುಂಬಿಕೊಳ್ಳಿ...ಎಣಿಸ್ಕೊಳ್ಳಿ. ಎಲ್ಲರೂ ಇದಾರೋ ನೋಡಿಕೊಳ್ಳಿ....

ಏನಾಗಿರಬಹುದೆಂದು ಆಶ್ಚರ್ಯ ಪಡುತ್ತ, ಸುತ್ತ ಪರಿಶೀಲಿಸುತ್ತ, ಅರ್ಥವಾಗದೆ, ಮಕ್ಕಳನ್ನೆಬ್ಬಿಸಿ ಒಯ್ಯುತ್ತಾರೆ. ಎಲ್ಲರೂ ಆಚೆ ಹೋಗಿ, ಪೋಲಿಸ್ ಅಧಿಕಾರಿ ಮಾತ್ರ ಅಲ್ಲಿ ಉಳಿಯುತ್ತಾನೆ. ಆತ ತಿರುಗಾಡಿ ಅಲ್ಲಲ್ಲಿ ನಿಂತು ಪರಿಶೀಲಿಸತೊಡಗುತ್ತಾನೆ. ಏನೂ ತಿಳಿಯುವುದಿಲ್ಲ. ಇನ್ನೇನು ಹೊರಡಬೇಕು ಎನ್ನುವಷ್ಟರಲ್ಲಿ ನಾಚ್‌ವಾಲಿ ಗೆಜ್ಜೆ ದನಿ ಮಾಡುತ್ತಾಳೆ. ಪೋಲಿಸ್ ಆ ಕಡೆ ತಿರುಗುವ ಹೊತ್ತಿಗೆ ಪೋ. ಡಬ್ಬ ಖಿಂಜರ ಪೆಟ್ಟು ಬಾರಿಸುತ್ತದೆ. ಇತ್ತ ತಿರುಗಿದರೆ ಮತ್ತೆ ಗೆಜ್ಜೆ ದನಿ. ಆತ ಪುನಃ ಪರಿಶೀಲಿಸಿದರೆ ಏನೂ ಕಾಣುವುದಿಲ್ಲ. ಆತ, ಗೊಂದಲವಾಗಿ, ಏನೋ ತನ್ನದೇ ಭ್ರಮೆ ಎಂದುಕೊಂಡು ನಿರ್ಗಮಿಸುತ್ತಾನೆ. ಆದಾದ ಮೇಲೆ ಕಾರ್‌ಗಳು ಸ್ಟಾರ್ಟ್ ಆದ ಸದ್ದು : ಚೆಲ್ಲುವ ಬೆಳಕು, ಕಾರ್‌ಗಳು ಹೊರಟ ಸದ್ದು ಇತ್ಯಾದಿ–, ಅನಂತರ—ನೀರವ. ಮುದುಕನ ಪ್ರವೇಶ.

ಮುದುಕ : (ನೋಡಿ) ಹುಂ...(ಹುಡುಗಿ ಹತ್ತಿರ ಹೋಗಿ ನೋಡಿ ಎದುರು ಬಂದು) ಪಾಪ, ಹಾಯಾಗಿ ಮಲಗಿ ಬಿಟ್ಟಿದೆ...(ಮತ್ತೆ ನೋಡಿ)

ಮಲಕ್ಕೋ ಅಮ್ಮ, ಹೀಗೇ ಹಾಯಾಗಿ ಮಲಕ್ಕೋ. ನಿನ್ನ ಕಾಪಾಡೋಕೆ—ಕೆಂಪಣ್ಣ ಇದಾನೆ, ಆಕಾಶರಾಯ ಇದಾನೆ, ಮರಜ್ಜ ಇದಾನೆ....ಕೆಳಗೆ ಭೂಮಿ ಇದೆ, ಮೇಲೆ ಆಕಾಶ ಇದೆ !...ಪಾಪ ಚಳೀನೋ ಏನೋ...(ಸಮೀಪ ಹೋಗಿ ಬಟ್ಟೆ ಹೊದಿಸಿ ನೋಡಿ, ನಿಧಾನ ಈಚೆ ಬಂದು ನಿಷ್ಕ್ರಮಿಸುತ್ತಾನೆ.)

ಅನಂತರ—ಮರ ಮುಂತಾದುವೆಲ್ಲ ಕೂಡಿ 'ಬೆಟ್ಟಕ್ಕೆ ಚಳಿಯಾದರೆ'...ಹಾಡನ್ನು ಗುಣುಗುಣಿಸತೊಡಗುತ್ತವೆ. ಇಬ್ಬರು ಪೋಲೀಸರು ಎದುರು ಬದುರಾಗಿ ಕಾವಲು ಹಾಕುತ್ತಿದ್ದಾರೆ. ಒಬ್ಬರೊನ್ನೊಬ್ಬರು ಸಂಧಿಸುವಾಗ ಒಂದು ಸಲ, ಎರಡು ಸಲ, ಮೂರು ಸಲ—ಹೀಗೆ ಒಬ್ಬರ್‍ನೊಬ್ಬರು ನೋಡ್ಕೊಳ್ತ

ಪೋ ೧ : ಅಲ್ಲಪ್ಪ, ನಾವ್ ಯಾಕೆ ಇಲ್ಲಿ ಹೀಂಗೆ ಬೀಟ್ ಹೊಡೆಯಾದು ?

ಪೋ ೨ : ಯಾಕೆಂದ್ರೆ ? ಸಾಯೇಬ್ರು ಹೇಳಿಲ್ವಾ ? ಡ್ಯೂಟಿ ಅಲ್ವಾ ?

ಪೋ ೧ : ಡೂಟಿ ಸಮ ಕಣಲೇ. ಆದ್ರೆ, ಇಲ್ಲೇನು ಹೆಣ ಬಿದ್ದೈತಾ ? ಕಳ್ಳಬಟ್ಟೆ ಸಿಕ್ಕೈತಾ ? ಮಾರಾಮಾರಿ ನಡೆದೈತಾ ?....ಏನೂ ಇಲ್ದೆ, ಈ ನರಪಿಶಾಚಿ ಇಲ್ದಿರೋ ಊರ ಹೊರಗಿನ ಬಯಲಾಗೆ ಸುಮ್ನೆ ಬೀಟ್ ಹಾಕೋದಂದ್ರೆ...

ಪೋ ೨ : ಅದೆಲ್ಲಾ ನಮ್ಮ ಸಾಯೇಬ್ರಿಗೆ ಗೊತ್ತಿಲ್ವಾ ? ನೀ ಯಾಕೆ ತಲೆ ಕೆಡಿಸ್ಕಂತೀ ?...ನಮದು ಡೂಟಿನಪ !

ಪೋ ೧ : ಅಲ್ಲಪ್ಪಾ, ಅದೇನೋ ನಿನ್ನೆ ರಾತ್ರೆ ಊರಾಗೆ ಗಲಾಟೇಂತೆ...... ಇಸ್ಕೋಲಿಗೆ ಹೋದ ಹುಡುಗರನ್ನ ಬೂತ ಅಡ್ಡಹಾಕಿ ಮನಗಿಸಿತ್ತಂತೆ ...ನಡೂರಾತ್ರೇಲಿ ನಮ್ಮ ಸಾಯೇಬ್ರು ಜೀಪು ತಂದು ಮಕ್ಕಳನ್ನ ಎತ್ಕಂಡು ಹೋದ್ರಂತೆ...

ಪೋ ೨ : ಅಯ್, ನಿನ್ನಂಗೇ ನಾನೂ ನಿನ್ನೆ ರಾತ್ರಿ ಡೂಟಿ ಮ್ಯಾಲೆ ಹಳ್ಳೀಗೆ ಹೋಗಿದ್ದಲ್ವಾ ? ನಂಗೇನು ಗೊತ್ತು ? ಯಾರ್‍ಯಾರೋ ಏನೇನೋ ಅಂದ್ಕತ್ತಿದ್ರಪಾ.

ಪೋ ೧ : ಅಲ್ಲ, ನಮಗೆ ಯಾಕೆ ಬುಡು, ನಾವಾತು ಡೂಟಿ ಆತು....ಅಲ್ಲ,

ಇವತ್ತು ಬೆಳಗಾತ ಒಂದು ಚಿಕ್ಕ ಮಗೀನ ಜೇಪಿನ ಮ್ಯಾಲ ಕರ್ಕಂಬರಲಿಲ್ವಾ ?....ಆಂ ?

ಪೋಲೀಸ್ ೨ : ಆಯ್; ಸುಮ್ನಿರು ಮಾರಾಯ, ಊರ ಪಂಚೇತಿಗೆ ನೀ ಯಾಕೆ ತಲೆ ಕೆಡಿಸ್ಕಂತೀ...ಅಲ್ಲ, ಏನ್ ಸೆಕೆ ಅಂತೀನಿ ಮಾಡ ತುಂಬ್ಕಂಡಿದ್ರೂ... ರಾತ್ರಿ ಇಡೀ ಬೀಟ್ ಹಾಕೋದ್ರಾಗೆ ಈಗ ಕಣ್ಣು ಮುಚ್ಕಂತವೆ... (ಎನ್ನುತ್ತ ಮರದ ಬುಡಕ್ಕೆ ಕೂರುತ್ತಾನೆ)

ಪೋಲೀಸ್ ೧ : ನಂಗಂತೂ ಕಣ್ಣು ಕೆಂಡ ಆಗಿ ಭುಗ್ ಭುಗ್ ಅಂತವೆ ಮಾರಾಯಾ.... (ಎನ್ನುತ್ತ ಪೋಸ್ಟ್‌ಡಬ್ಬಿ ಹತ್ತಿರ ಕೂರುತ್ತಾನೆ)

ಪೋಲೀಸ್ ೨ : ಹಂಗೇ ಸ್ವಲ್ಪ ಕೂತ್ಕೊ... ಒಂದು ಚಣ...ಮತ್ತೆ ನಿದ್ದೆ ಗಿದ್ದೆ ಮಾಡಿ ಬುಟ್ಟೀಯಾ ? ಮತ್ತೆ, ಡೂಟಿ ಮ್ಯಾಲೆ ಇದ್ಕಂಡು....(ಎಂದು ಅಲ್ಲೇ ಒರಗುತ್ತಾನೆ)

ಪೋ ೧ : ಅಯ್, ನಿದ್ದೆ ಮಾಡಾಕೆ ನಂಗೇನು ಸ್ವಯ ಇಲ್ಲವಾ, ಡ್ಯೂಟಿ ಮ್ಯಾಲಿದ್ಕಂಡು....(ಎಂದು ತಾನೂ ಒರಗುತ್ತಾನೆ)

ಇಬ್ಬರೂ ಕಣ್ಣು ಮುಚ್ಚುತ್ತಾರೆ. ಕ್ಷಣ ನೀರವ. ಟೆ. ಕಂಬ ಮೆಲ್ಲಗೆ ಒಮ್ಮೆ ತಂತಿ ಮೀಟಿ ನಿಲ್ಲಿಸುತ್ತದೆ. ಪೋ. ಡಬ್ಬ ಒಮ್ಮೆ ಪೆಟ್ಟು ಬಾರಿಸಿ ನಿಲ್ಲಿಸುತ್ತದೆ, ನಾಚ್‌ವಾಲಿ ಗೆಜ್ಜೆ ದ್ವನಿ ಮಾಡುತ್ತಾಳೆ.

ಪೋ ೧ : (ತಟ್ಟನೆ ಎದ್ದು) ಅಲೆ, ಅಲೆ, ಅಲೆ....ಅಲೆ....

ಎದ್ದು ಸುತ್ತಲೂ ನೋಡುತ್ತಾನೆ, ಹುಡುಕುತ್ತಾನೆ. ನಾಚ್‌ವಾಲಿ ಚಿತ್ರದ ಎದುರು ನಿಂತು ನೋಡುತ್ತಾನೆ. ಅಲ್ಲಿಂದ ತಿರುಗುತ್ತಾನೆ. ಅಷ್ಟರಲ್ಲಿ ನಾಚ್‌ವಾಲಿ ಮತ್ತೆ ಒಮ್ಮೆ ಗೆಜ್ಜೆ ದನಿ ಮಾಡುತ್ತಾಳೆ. ಪೋಲೀಸ್ ಆಶ್ಚರ್ಯದಿಂದ ಮತ್ತೆ ತಿರುಗಿ ನೋಡುತ್ತಾನೆ. ಅದೇ ಪೋಸ್ಟರ್. ಅಲ್ಲಿಂದ ಮುಂದಕ್ಕೆ ಬರುತ್ತಾನೆ)

ಪೋ ೧ : ಅಯ್ ನನ ! ರಾತ್ರೆ ಕುಡದ ಕಳ್ಳಭಟ್ಟಿ ಈಗ ಕೆಲಸ ಮಾಡಾಕೆ ಹತ್ತಿಬುಡ್ತಾ ?....ಆಂ ?....(ಪೋಲೀಸ್ ೨ ಈಗ ನಿದ್ದೆಯಲ್ಲಿ ಗೊರಕೆ ಹೊಡೆಯುತ್ತಿರುವುದು ಕಂಡು) ಅಯ್ ಇವನ ! ಮಾರಾಜನಪಾ ಇವನು ! ರುಸ್ತುಂ !....ನಂಗೆ ನಿದ್ದೆ ಮಾಡಿ ಬುಟ್ಟೀಯಾ ಅಂತಂದು

......(ಎನ್ನುತ್ತ ಮತ್ತೆ ಮೊದಲಿನ ಜಾಗದಲ್ಲೇ ಕೂತು ಒರಗುತ್ತಾನೆ, ಕಣ್ಣು ಮುಚ್ಚುತ್ತಾನೆ)

ಪೋಲೀಸ್ ೨ ನ ಲಯ ಬದ್ಧವಾದ ಗೊರಕೆ. ಆ ಲಯಕ್ಕನುಸರಿಸಿ, ತಟಕ್ಕನೆ, ಮರ–ಪೋಸ್ಟ್ ಡಬ್ಬದ ಜಾಗಕ್ಕೂ, ಪೋಸ್ಟ್ ಡಬ್ಬ–ಟೆಲಿಫೋನ್ ಕಂಬದ ಜಾಗಕ್ಕೂ, ಟೆಲಿಫೋನ್ ಕಂಬ ಮರದ ಜಾಗಕ್ಕೂ ಸರಿದುಕೊಳ್ಳುತ್ತವೆ. ಮತ್ತೊಮ್ಮೆ ನಾಚ್‌ವಾಲಿಯ ಗೆಜ್ಜೆ.

ಪೋ. ೧ : (ತಟ್ಟನೆ ಎದ್ದು) ಅಲೆ !....ಏಯ್ ಇವನೆ ! ಇವನೆ !....

ಪೋ. ೨ : (ಮಲಗಿದಲ್ಲೆ ಮೈಯೆಳೆದು) ಏ, ಬಿದ್ಕಳಲೇ....

ಪೋಲೀಸ್ ೧, ಸುತ್ತ ನೋಡಿ ಏನೂ ಅರ್ಥವಾಗದೆ ಹಾಗೇ ಒರಗಿ ಕಣ್ಣು ಮುಚ್ಚುತ್ತಾನೆ. ಪೋ. ಡಬ್ಬ ಒಂದು ಮೃದಂಗದ ಪೆಟ್ಟು ಹಾಕುತ್ತದೆ. ಪೋಲೀಸ್ ೨ ಬೆಚ್ಚಿ ಏಳುತ್ತಾನೆ. ತಲೆಯೆತ್ತಿ ಚಕಿತನಾಗುತ್ತಾನೆ.

ಪೋ. ೨ : ಏಯ್ ಇವನೆ, ಇವನೆ...ಇಲ್ನೋಡಿಲ್ಲಿ....

ಪೋ. ೧ : ಏ, ಬಿದ್ಕಳಲೇ...

ಪೋ. ೨ : ಇಲ್ನೋಡಲೇ, ಏಯ್....ನಾ ಮರದ ಕೆಳಗೆ ಮಲಗಿದ್ದಲ್ವಾ ?...ಇಲ್ಲಿ ಪೋಸ್ಟ್ ಡಬ್ಬಿ ಹ್ಯಾಂಗೆ ಬಂತು ?

ಪೋಲೀಸ್ ೧ ಕಣ್ಣುಬಿಟ್ಟು ಆತನ ಕಡೆ ನೋಡಿ ಗಹಗಹಿಸಿ ನಗತೊಡಗುತ್ತಾನೆ. ಪೋಲೀಸ್ ೨–ಏಯ್ ಏಯ್ ಎನ್ನುತ್ತಲೇ ಇದ್ದಾನೆ. ಈ ನಗುವಿಗೆ ಹೊಂದಿ ಹಿಂದೆ ಪುನಃ ಮರ, ಟೆಲಿ.ಕಂಬ, ಪೋ.ಡಬ್ಬಗಳು ತಂತಮ್ಮ ಜಾಗ ಸೇರಿ ಕೊಳುತ್ತವೆ.

ಪೋ. ೧ : ಏನಾತಲೆ ? ನಿಂಗೂ ರಾತ್ರೇದೇ ಕಳ್ಳಬಟ್ಟೇನಾ ? ಇಲ್ನೋಡಲೇ ಇಲ್ಲಿ. ನಾ ಮರದ ಕೆಳಗೆ ಮಲಗಿದ್ದಲ್ವಾ ?

ಎನ್ನುತ್ತ ತಲೆಯೆತ್ತಿ ನೋಡಿದರೆ ಮರ. ಅವನು ಮರದ ಕೆಳಗೇ ಇರುವುದನ್ನು ಕಂಡ ಪೋಲೀಸ್ ೧ ಮತ್ತೆ ಗಹಗಹಿಸಿ ನಗುತ್ತಾನೆ. ಆ ಲಯದಲ್ಲಿ ಮತ್ತೆ ಅವೆಲ್ಲ ಜಾಗ ಬದಲಿಸಿಕೊಳ್ಳುತ್ತವೆ.

ಪೋ. ೧ : ಈಗ ಮರದ ಕೆಳಗೇ ಇಲ್ವಾ ?

ಎಂದು ನೋಡಲು ಅಲ್ಲಿ ಮರ ಇಲ್ಲ. ಟೆಲಿ. ಕಂಬ ಇದೆ. ತನ್ನ ಹಿಂದೆ

ನೋಡಲು ಅಲ್ಲಿ ಈಗ ಟೆಲಿ. ಕಂಬ ಇಲ್ಲ. ಪೋಸ್ಟ್‌ಡಬ್ಬ ಇದೆ. ಅವನೂ ಗಾಬರಿ ಯಾಗುತ್ತಾನೆ.

ಪೋ. ೨ : ಅಲೆ ಅಲೆ ಅಲೆ...

ಇಬ್ಬರೂ ಎದ್ದು ಅವನ್ನೇ ನೋಡುತ್ತ ಮುಂದೆ ಬರುತ್ತಾರೆ. ಮುಂದೆ ಬರುತ್ತ ಸುತ್ತ ಆಚೀಚೆ ನೋಡತೊಡಗುತ್ತಾರೆ. ಅಷ್ಟರಲ್ಲಿ ಪುನಃ ಎಲ್ಲ ಯಥಾ ಸ್ಥಾನಕ್ಕೆ ಮರಳಿವೆ. ಇಬ್ಬರೂ ಆಶ್ಚರ್ಯದಿಂದ ಮಾತಿಲ್ಲದೆ, ಒಬ್ಬರನ್ನೊಬ್ಬರು ತಡವಿ ಮುಟ್ಟಿ ಕಣ್ಣಿಟ್ಟು ನೋಡಿಕೊಳ್ಳುತ್ತಾರೆ. ಅಷ್ಟರಲ್ಲಿ ಗೆಜ್ಜೆ ಸದ್ದು. ತಟ್ಟನೆ ತಿರುಗುತ್ತಾರೆ. ಮತ್ತೆ ಏನೂ ಇಲ್ಲ...ಈಗ ಆ ಇಬ್ಬರು ಒಬ್ಬರನ್ನೊಬ್ಬರು ಭೂತವೆನ್ನುವಂತೆ ನೋಡುತ್ತ, ಮೆಲ್ಲ ಮೆಲ್ಲನೆ ಹಿಂದೆ ಸರಿದುಕೊಳ್ಳುತ್ತ ಕಡೆಗೊಮ್ಮ ಒಂದೇ ಸಲಕ್ಕೆ ಇಬ್ಬರೂ ಕಿರುಚಿ ಓಡುತ್ತಾರೆ.

(ಇಬ್ಬರು ನಾಗರಿಕರ ಪ್ರವೇಶ)

ಒಂದು : ಇದೇ ಜಾಗ. ಇಲ್ನೋಡಿ, ಇದೇ.

ಎರಡು : ಅಲ್ಲ, ಇದೇನು ಬಂತೂ ಅಂತೇನೆ ನಮ್ಮ ಊರಿಗೆ.

ಒಂದು : ಎರಡು ದಿನದಿಂದ ಇದೇ ಹಾಡು. ನಮ್ಮ ಮಕ್ಕಳೆಲ್ಲ ಎಂಥಾ ಶಿಸ್ತಿನಿಂದ ಇದ್ದವು! ಈಗ ನೋಡಿದ್ರೆ, ಈ ಪುಟಗೋಸಿ ಹುಡುಗ್ರು ಸ್ಕೂಲಲ್ಲಿ ಸ್ಟ್ರೈಕ್ ಮಾಡ್ತಾವಂತೆ. ಎರಡು ರಾತ್ರಿಯಾಯ್ತು, ನಡೂ ರಾತ್ರೀಲಿ ಮನೆ ಬಿಟ್ಟು ಓಡಿ ಬಂದು ಇಲ್ಲಿ ಸೇರ್ಕೋತಾವೆ. ಹೀಗಾದ್ರೆ ಮಕ್ಕಳನ್ನು ಹ್ಯಾಗೆ ಕಂಟ್ರೋಲ್ ಮಾಡೋದು? ನಾವೇನು, ನೆಮ್ಮದಿಯಾಗಿ ಊರಲ್ಲಿ ಬಾಳಬೇಕೋ?

ಎರಡು : ಅದೇ ಅಂತೀನಿ. ಆ ಮೇಯರ್‌ಗಾದ್ರೂ ಬುದ್ಧಿ ಬೇಡವಾ? ಹ್ಯಾಗಾದ್ರೂ ಮಾಡಿ ಇದನ್ನ ಹತೋಟಿ ಮಾಡೋಕೆ ಆಗೋಲ್ವಾ? ಮತ್ತೆ, ನಮ್ಮ ಹತ್ರ ಬಂದು ಓಟು ತಗೋತಾನೆ, ಅದು ಮಾಡ್ತೇನೆ ಇದು ಮಾಡ್ತೇನೆ ಅಂದ್ಕೊಂಡು.

ಒಂದು : ಅವಳು ಇದಾಳೆ ನೋಡಿ, ಡೆಪ್ಟಿ ಮೇಯರ್, ಸೋಗಲಾಡಿ! ಒಳ್ಳೆ ಮಾಡಿ ಓಟು ತಗೋತಾಳೆ. ಶೋಕಿ ಮಾಡ್ಕೊಂಡು ತಿರಗೋಕೆ ಆಗತ್ತೆ, ಇದೇನು ಅಂತ ನೋಡಿ ಸರಿ ಮಾಡೋಕೆ ಆಗೋಲ್ವಾ?

ಎರಡು : ಅದೇ ಅಂತೇನೆ. (ನೋಡಿ) ಅಲ್ನೋಡಿ, ಮೇಯರ್ರೇ ಬರ್ತಿದಾನೆ!

ಒಂದು : ಸುಮ್ನಿರಿ, ಕೇಳಿಸೀತು.

ಮೇಯರ್, ಡೆಪ್ಯೂಟಿ ಮೇಯರ್ (ಹೆಂಗಸು) ಪ್ರವೇಶ.

ಒಂದು : ಇದೇನ್ ಸ್ವಾಮಿ, ಮೂರು ದಿನದಿಂದ, ಇದೇ ನಡೀತಿದೆಯಲ್ಲಾ, ಈ ಊರಲ್ಲಿ. ಏನು ಹೇಳೋರು ಕೇಳೋರು ಇಲ್ವೇ ಇಲ್ವಾ ? ಇಂಥಾ ದೊಡ್ಡ ಮುನಿಸಿಪಾಲಿಟಿ ಇದ್ಕೊಂಡು, ತಮ್ಮಂಥವರು ಮೇಯರ್ ಆಗಿ ಇದ್ದುಕೊಂಡು ಹೀಗೆ ನಡೆಯೋದು ಅಂದ್ರೆ....

ಎರಡು : ಒಳ್ಳೇ ಕಿಂದರಿಜೋಗಿ ಕತೆ ಆಗಿಬಿಡ್ತು !

ಒಂದು : ನಾವು ಯಾರೂ ಊರಲ್ಲಿ ಇರೋ ಹಾಗೇ ಇಲ್ಲ. ಅಲ್ಲ, ನಮ್ಮ ವಿಚಾರ ಬಿಡಿ. ಊರಲ್ಲೆಲ್ಲ ಜನ ಇನ್ನೇನು ದಂಗೆ ಏಳೋದು ಬಾಕಿ, ಅಷ್ಟೆ.

ಮೇಯರ್ : ಹೌದು, ನನಗೂ ತಿಳಿಯುತ್ತೆ. ಏನೇನು ವ್ಯವಸ್ಥೆ ಮಾಡಬಹುದೋ ಎಲ್ಲಾ ಮಾಡ್ತಿದೇನೆ. ನಾವು ಯಾರೂ ಸುಮ್ಮನೆ ಕೂತ್ಕೊಂಡಿಲ್ಲ.

ಎರಡು : ಹೌದು, ತಾವು ಮುತವರ್ಜಿ ಮಾಡ್ತಿದೀರಿ ಅಂತ ನಮಗೆ ತಿಳಿಯುತ್ತೆ. ಜನಕ್ಕೆ ತಿಳೀಬೇಕಲ್ಲ.

ಒಂದು : ಜನಕ್ಕೆ ತಿಳೀಬೇಕಲ್ಲ ! ಜನ, ಪಾಪ, ಅಜ್ಞರು !

ಎರಡು : ನೆನ್ನೆಯಿಂದ ನಮಗಿಬ್ಬರಿಗೆ ಅದೇ ಕೆಲಸ. ಮನೆ ಮನೇಗೆ ಹೋಗಿ, ಒಬ್ಬೊಬ್ಬರಿಗೂ ತಿಳೀಹೇಳೋದು. ಅಪ್ಪಾ ಮೇಯರ್ ಮುತವರ್ಜಿ ಮಾಡ್ತಿದಾರೆ, ನಿಗಾ ತಗೋತಿದಾರೆ, ನೀವೆಲ್ಲ ತಾಳ್ಮೆಯಿಂದ ಇರಬೇಕು ಅಂತ.

ಮೇಯರ್ : ನೋಡಿ, ಪೋಲೀಸ್ ಬಂದೋಬಸ್ತ್ ಮಾಡಿಸ್ತೀನಿ. ಅಗತ್ಯ ಬಿದ್ದರೆ ರಿಸರ್ವ್ ಪೋಲೀಸ್ ಅಥವಾ ಬೇಕಾದ್ರೆ ಮಿಲಿಟರಿನಾದರೂ ಕರೆಸೋಣ. ಕರೆಸೋದಕ್ಕೆ ವ್ಯವಸ್ಥೆ ಮಾಡಿದೇನೆ. ಆದ್ರೆ, ನಮ್ಮ ಕೈ ಮೀರಿದ ವಿಚಾರ ನೋಡಿ. ಮನುಷ್ಯನಾದರೆ ಹತೋಟಿ ಮಾಡಬಹುದು. ಮರ, ಪೋಸ್ಟ್‌ಡಬ್ಬಿ ತಿರುಗಾಡುತ್ತೆ ಅಂದ್ರೆ ಏನು ಮಾಡೋದು ? ಪೋಲಿಸ್ನೋರು ಬೀಟ್ ಹಾಕೋಕೂ ಹೆದರ್ತಾರೆ.

ಒಂದು : ಅದೇ ನಾವೂ ಜನಕ್ಕೆ ತಿಳೀ ಹೇಳ್ತಾ ಇದೇವೆ, ಹೀಗಿದೆ ತೊಂದ್ರೆ ಅಂತ.

ಎರಡು : ಜನ ಅಜ್ಞರು ನೋಡಿ !

ಮೇಯರ್ : ಇದೇನು ಅಂತ ಕಂಡು ಹಿಡಿಯೋದಕ್ಕೆ ನಮ್ಮ ಶ್ರೇಷ್ಠ ವಿಜ್ಞಾನಿಗಳಿಗೆ ಆದೇಶ ಕೊಟ್ಟಿದೇವೆ. ಅವರು ಈ ಬಗ್ಗೆ ಸಂಶೋಧನೆ ಮಾಡ್ತಾ ಇದಾರೆ. ಎಲ್ಲೆಲ್ಲಿಂದಲೋ ಅವರಿಗೆ ಬೇಕಾದ ಹೊಸ ಹೊಸ ಉಪಕರಣ ಗಳನ್ನೆಲ್ಲಾ ತರಿಸಿ ಕೊಟ್ಟಿದೇವೆ.

ಒಂದು : ಆದರೂ, ಜನ ಅಜ್ಞರು ನೋಡಿ...ಆ ಡೆಪ್ಯೂಟಿ ಮೇಯರ್‌ಗೂ ತಿಳಿಯೋಲ್ವಾ ? ಅವಳೇನು ಹೆಂಗಸಲ್ವ–ಅಂತಾರೆ.....ಮಕ್ಕಳು ಮರಿ ಅನ್ನೋ ಶ್ರದ್ಧೇನೂ ಇಲ್ಲದೆ...

ಡೆಪ್ಯುಟಿ ಮೇ : ನಾ ಹೇಳಲಿಲ್ವಾ ಮೇಯರ್, ಕಡೇಗೆ ಇದು ನಮ್ಮ ಕುತ್ತಿಗೇಗೆ ಬರುತ್ತೆ ಅಂತ. ಏನಾದ್ರೂ ಮಾಡಿ ಅಂತ ನಾ ಹೇಳ್ತಾನೇ ಬಂದೆ, ನೋಡೋಣ ನೋಡೋಣ ಅಂತ ನೀವು ದೂಡ್ತಾನೇ ಬಂದ್ರಿ. ಈಗ ನೋಡಿ, ಕಡೇಗೆ ನಿಮ್ಮನ್ನ ಬಿಟ್ಟು ಬಿಡ್ತಾರೆ, ನಮ್ಮನ್ನು ಹಿಡ್ಕೋತಾರೆ !

ಮೇಯರ್ : ಸ್ವಲ್ಪ ಸುಮ್ನಿರಮ್ಮ, ನಿಂಗೆ ತಿಳಿಯೋಲ್ಲ (ನಾಗರಿಕರಿಗೆ) ನೋಡಿ, ನಿಮ್ಮಂಥೋರು ನಮಗೆ ಸ್ವಲ್ಪ ನೆರವಾಗ್ಬೇಕು. ನಾನೂ ಎಲ್ಲಾ ಮಾಡ್ತಿದೀನಿ.

ಪೋಲೀಸ್ ಅಧಿಕಾರಿ, ಇಬ್ಬರು ಕಾನ್‌ಸ್ಟೇಬಲ್‌ಗಳ ಜೊತೆ ಬಂದು ಸೆಲ್ಯೂಟ್ ಮಾಡುತ್ತಾರೆ.

ಮೇಯರ್ : ನೋ ನೋ ನೋ ನೋ. ನೀವು ಹೀಗೆ ಮಾಡಿದ್ರೆ ಆಗೋದೇ ಇಲ್ಲ. ಇಷ್ಟು ಜನ ಅಧಿಕಾರಿಗಳಿದೀರಿ, ಏನೂ ಮಾಡೋಕಾಗೋದಿಲ್ಲ ಅಂದ್ರೆ? ನಿಮಗೇನಂತೆ, ತಿಂಗಳಾ ಸಂಬಳ ತಗೊಂಡು ಬಿಡ್ತೀರಿ. ಆಮೇಲೆ ಬರೋದು ನಮ್ಮ ಕುತ್ತಿಗೇಗೆ ಅಷ್ಟೆ.

ಡೆಪ್ಯುಟಿ : ನಾ ಅದ್ನೇ ಹೇಳ್ದೆ ಇವರಿಗೆ. ಸುಮ್ನಿರಿ ಅಮ್ಮ ನಿಮಗೆ ತಿಳಿಯೋಲ್ಲ ಅಂತ ನನಗೇ ಬಾಯಿ ಕಟ್ತಾರೆ.

ಅಧಿಕಾರಿ : ವಿಜ್ಞಾನಿಗಳು ಬಂದ್ರು ಸಾರ್.

ವಿಜ್ಞಾನಿ ತನ್ನ ಸಹಾಯಕನೊಡನೆ ಸಲಕರಣೆಗಳನ್ನೆಲ್ಲ ಹೊರಿಸಿಕೊಂಡು ಬರುತ್ತಾನೆ.

ಮೇಯರ್ : ವಿಜ್ಞಾನಿಗಳೆ, ಈಗ ಯಾವ ತೀರ್ಮಾನಕ್ಕೆ ಬಂದ್ರಿ ? ಇದೆಲ್ಲ ವಿಧಾನ

ಆಗೋದಲ್ಲ, ಬೇಗ ಬೇಗ ಪರಿಹಾರ ಆಗಬೇಕು. ಇಲ್ಲದಿದ್ರೆ ಜನ ನಮ್ಮನ್ನು ಸುಮ್ಮನೆ ಬಿಡೋದಿಲ್ಲ.

ಒಂದು : ಜನ ಅಜ್ಞರು ನೋಡಿ....

ಡೆಪ್ಯುಟಿ : ಅವರು ನಮ್ಮನ್ನು ಹಿಡಕೋತಾರೆ. ನೀವು ಈ ಕೆಲಸಕ್ಕಾಗೇ ಇದ್ದು ಕೊಂಡು ಈಗ ಎರಡು ದಿನಾ ಆದ್ರೂ ಏನೂ ಮಾಡಿಲ್ಲ.

ವಿಜ್ಞಾನಿ : ಅಮ್ಮಾ, ನಿಮಗೆ ತಿಳಿಯೋಲ್ಲ, ನೀವು ಸುಮ್ಮನಿರಿ.

ಮೇಯರ್ : ಸ್ವಲ್ಪ ಸುಮ್ಮನಿರಮ್ಮ, ನೀ ಮಧ್ಯೆ ಮಾತಾಡ್ಬೇಡ. ವಿಜ್ಞಾನಿಗಳೇ ಇದು ಅರ್ಜೆಂಟಾಗಿ ಆಗಬೇಕಾದ ಕೆಲಸ.

ವಿಜ್ಞಾನಿ : ಗೊತ್ತು ಸಾರ್, ನಮ್ಮ ಫೈಲುಗಳನ್ನು ನೋಡಿ. ಎಲ್ಲದರ ಮೇಲೂ ಮೋಸ್ಟ್ ಅರ್ಜೆಂಟ್ ಅಂತ ಅಂಟಿಸಿಟ್ಟಿದೀವಿ. ನಿನ್ನೆ ರಾತ್ರಿಯೆಲ್ಲಾ ನಾ ಇಲ್ಲೇ ಇದ್ದೆ. ಈ ಮರ, ಈ ಪೋಸ್ಟ್‌ಡಬ್ಬ, ಈ ಟೆಲಿಫೋನ್ ಕಂಬ ಇವೆಲ್ಲ ಚಲಿಸಿದ್ದನ್ನ ಹಾಡು ಹೇಳಿದ್ದನ್ನ ನಾನೇ ನೋಡಿದೆ. ಆದ್ರೆ, ಕಣ್ಣಲ್ಲಿ ನೋಡಿದೆ ಅಂತ ನಂಬಿ ಬಿಡೋಕಾಗುತ್ತೋ—ಇಲ್ಲ. ವೈಜ್ಞಾನಿಕವಾಗಿ ಪರಿಶೀಲನೆ ಮಾಡ್ಬೇಕು.

ಮೇಯರ್ : ಸರಿ. ಅದನ್ನೇ ಬೇಗ ಮಾಡಿ ಅಂತ ಹೇಳೋದು.

ವಿಜ್ಞಾನಿ : ಇದಲ್ಲಾ ಸಂಶೋಧನೆ ವಿಷಯ ಸಾರ್. ನಿಧಾನ ಆಗುತ್ತೆ, ಹೊತ್ತು ತಗೋಳುತ್ತೆ. ರಾಜಕೀಯದ ಹಾಗೆ ಚಟ್ ಪಟ್ ಅಂತ ಮಾಡಿ ಮುಗಿ ಸೋಕೆ ಬರೋಲ್ಲ ಸಾರ್. ಇಲ್ನೋಡಿ, ಅತ್ಯಾಧುನಿಕವಾದ ಈ ಕ್ಯಾಮರ ತರಿಸಿದ್ದೀನಿ. ಈ ದೇಶದಲ್ಲೇ ಇಂಥಾ ಕ್ಯಾಮರಾ ಇಲ್ಲ. ಇದು ಅತೀಂದ್ರಿಯ ವಸ್ತುಗಳ ಫೋಟೋ ತೆಗೆಯುತ್ತೆ. ನೆನ್ನೆ ರಾತ್ರಿ ಕೂಡ ಫೋಟೋ ತೆಕ್ಕೊಂಡೆ. ಆದ್ರೆ...ಇದರಲ್ಲಿ ಬರೋ ಫೋಟೋ ಕಣ್ಣಿಗೆ ಕಾಣಿಸೋದಿಲ್ಲ.

ಒಂದು : ಅರೆ, ಕಣ್ಣಿಗೆ ಕಾಣದೇ ಇರೋ ಫೋಟೋ ತೆಗೆದು ಏನು ಪ್ರಯೋಜನ?

ವಿಜ್ಞಾನಿ : ಅದನ್ನ ಕಂಪ್ಯೂಟರ್‌ಗೆ ಫೀಡ್ ಮಾಡ್ಬೇಕಾಗುತ್ತೆ. ಅದರಲ್ಲಿ ಏನೇನು ಕಾಣಿಸುತ್ತೆ ಅನ್ನೋದನ್ನು ಕಂಪ್ಯೂಟರ್ ಮುಖಾಂತರ ತಿಳಕೋ ಬೇಕಾಗುತ್ತೆ....ಬೇಗ ಅಂದರೆ ಆಗೋಲ್ಲ ಸಾರ್. ಆದ್ರೂ ನಾನು

ಬೇಗಾನೇ ಮಾಡ್ತಿದೇನೆ.

ಮೇಯರ್ : ಅದೇನ್ ಮಾಡ್ತೀರೋ ಮಾಡಿ.

*ಮೇಯರ್ ಹೊರಡುತ್ತಾನೆ. ಡೆಪ್ಯುಟಿ ಮೇಯರ್, ಪೋಲೀಸ್ ಅಧಿಕಾರಿ ಹಿಂಬಾಲಿಸುತ್ತಾರೆ.*

ವಿಜ್ಞಾನಿ : (ಜೊತೆಯವನಿಗೆ) ಹುಂ, ಎಲ್ಲಿ ಕೆಮೆರಾ ಫಿಕ್ಸ್ ಮಾಡು.

*ಕೆಮೆರಾ ಜೋಡಿಸುತ್ತಿರಲು ನಾಗರಿಕರಿಬ್ಬರು ಅದನ್ನೇ ನೋಡುತ್ತಿದ್ದಾರೆ.*

ಒಂದು : (ವಿಜ್ಞಾನಿಗೆ) ವಿಜ್ಞಾನಿಗಳೇ, ಮರ ನಡೆಯೋದನ್ನು ಇದು ಫೋಟೋ ತೆಗೆದುಕೊಳ್ಳುತ್ತಾ ?

ಎರಡು : ತೆಗೆದುಕೊಳ್ಳುತ್ತೆ. ಆದ್ರೆ ಫೋಟೋ ಕಾಣೋದಿಲ್ಲ ಅಷ್ಟೆ !

ವಿಜ್ಞಾನಿ : ನೋಡಿ, ಈ ವಿಷಯದಲ್ಲಿ ತಜ್ಞತೆ ಇಲ್ಲದೆ ಇರೋರಿಗೆ ಇದೆಲ್ಲ ಗೊತ್ತಾಗೋಲ್ಲ. ನಾನು ನನ್ನ ಜೀವವಿಡೀ ಎಲ್ಲಾ ಈ ಅತೀಂದ್ರಿಯ ವಿಜ್ಞಾನಕ್ಕಾಗೇ ಸವೆಸಿದೇನೆ. ಆದ್ರೂ, ಇವತ್ತಿಗೂ ನನಗೆ, ಅತೀಂದ್ರಿಯ ವಸ್ತು ಅಥವಾ ಶಕ್ತಿ ಇದೆಯೋ ಇಲ್ಲವೋ ಅನ್ನೋದನ್ನು ವೈಜ್ಞಾನಿಕವಾಗಿ ಖಚಿತ ಪಡಿಸೋದಕ್ಕೆ ಆಗಿಲ್ಲ.

ಒಂದು : ಸ್ವಾಮಿ, ಈ ಊರಲ್ಲಿ ಒಬ್ಬ ಹರಿದಾಸ ಇದ್ದ. ಶ್ರೀರಾಮನನ್ನು ಕಾಣದೇ ಇರೋ ಈ ಕಣ್ಣುಗಳಿದ್ದಾದರೂ ಏನು ಪ್ರಯೋಜನವಪ್ಪಾ–ಅಂತ ಜೀವ ಮಾನ ಇಡೀ ಎಲ್ಲರಿಗೂ ಹೇಳ್ತಾನೇ ಇದ್ದ. ಹೋದ ವರ್ಷ ಇಲ್ಲೇ ಒಂದು ದೇವಸ್ಥಾನದಲ್ಲಿ ಸತ್ತ. ಸಾಯೋ ಹೊತ್ತಲ್ಲಿ ನಾನು ಅವನನ್ನು ಕೇಳಿದೆ—ದಾಸರೇ, ನೀವು ಶ್ರೀ ರಾಮನನ್ನು ಕಂಡಿದೀರಾ ಅಂತ. ಇಲ್ಲಪ್ಪಾ ಅಂತ ಪ್ರಾಣಬಿಟ್ಟ.

*ಅಷ್ಟರಲ್ಲಿ ಸನಾತನ ಧರ್ಮ ಸಂಸ್ಥೆಯ ಸ್ವಯಂ ಸೇವಕರು ಗುಂಪಾಗಿ ಬರುತ್ತಾರೆ.*

ಮುಖಂಡ : ವಿಜ್ಞಾನಿಗಳ ಅತ್ಯಾಚಾರಕ್ಕೆ ಧಿಕ್ಕಾರ. ಸನಾತನ ಧರ್ಮಕ್ಕೆ ಜಯವಾಗಲಿ !

*ಎಲ್ಲರೂ ವಿಜ್ಞಾನಿಯನ್ನು ಸುತ್ತುಗಟ್ಟಿ ತಡೆಯುತ್ತಾರೆ.*

ವಿಜ್ಞಾನಿ : ಹೋಗಲಿ, ನಂಗೇನು ಬಿಡಿ... ಈ ದೇಶದ ಹಣೆಬರಹ ಇದು. ಇನ್ನು

ಎರಡು ಸಾವಿರ ವರ್ಷವಾದರೂ ಸರಿ, ಈ ಜನಕ್ಕೆ ವೈಜ್ಞಾನಿಕ ಬುದ್ಧಿ ವೈಜ್ಞಾನಿಕ ಚಿಂತನೆ ಅನ್ನೋದೇ ಬರೋಲ್ಲ. ಅಮೇರಿಕಾ ದೇಶದಲ್ಲಿದ್ದವನು ಈ ದೇಶಕ್ಕೆ ಬಂದದ್ದೇ ತಪ್ಪು....ಅಲ್ಲೇ ಇದ್ದಿದ್ರೆ ನನಗೆ ಇಷ್ಟು ಹೊತ್ತಿಗೆ ಆರು ಡಾಕ್ಟರೇಟ್ ಬಂದಿರ್ತಿತ್ತು. ವಾರಕ್ಕೆ ಹತ್ತು ಸಾವಿರ ಡಾಲರ್ ದುಡೀತಿದ್ದೆ. ಈ ದೇಶದ ಹಣೆಬರಹ ಇದು.

ಮೇಯರ್, ಡೆಪ್ಯುಟಿ ಮೇಯರ್ ಪ್ರವೇಶ

ಮೇಯರ್ : ಏನಿದು ? ಮತ್ತೆ ಇಲ್ಲೇನೋ ಶುರುವಾಯ್ತಲ್ಲ ?

ಇನ್ನೊಂದು ಕಡೆಯಿಂದ ಮತ್ತೊಂದು ಗುಂಪು ಪ್ರವೇಶಿಸುತ್ತದೆ. ಅವರ ಘೋಷಣೆ : ಮೂಢನಂಬಿಕೆಗೆ ಧಿಕ್ಕಾರ ! ಧಾರ್ಮಿಕ ಶಾಹಿಗೆ ಧಿಕ್ಕಾರ ! ಇತ್ಯಾದಿ...ಹೆಂಗಸು ಈ ಗುಂಪಿನ ನಾಯಕಿ.

ಮೇಯರ್ : ಅರೆ, ಈ ಕಡೆಯಿಂದ ಇನ್ನೊಂದು ಗುಂಪು ಬಂತಲ್ಲ. ಏನು ಇವರದ್ದೆಲ್ಲ ?

ನಾಯಕಿ : ಸ್ವಾಮಿ, ನಾವು ಪವಾಡ ವಿರೋಧಿ ಸಂಘದವರು. ಈ ದೇಶದಲ್ಲಿ ಸನಾತನ ಧರ್ಮದವರ ಹಾವಳಿಯಿಂದ ಬಡಜನತೆ ಯಾವತ್ತೂ ಅಜ್ಞಾನದ ಅಂಧಕಾರದಲ್ಲೇ ಬಿದ್ದಿರೋ ಹಾಗಾಗಿದೆ. ಈ ಮೂಢ ನಂಬಿಕೆಗಳಿಗೆ ಬಹಿಷ್ಕಾರ ಹಾಕಬೇಕು. ಪವಾಡ ನಡೆಸುವವರನ್ನು ಶಿಕ್ಷೆಗೆ ಗುರಿಮಾಡಬೇಕು.

ಮೇಯರ್ : (ಒಮ್ಮೆ ಇವರಿಗೆ) ತಿಳೀತು, ನೀವು ಹೇಳೋದು ಅರ್ಥವಾಯ್ತು. (ಇನ್ನೊಂದು ಗುಂಪಿಗೆ) ನೀವು ಹೇಳೋದೂ ತಿಳೀತು···

ಮುಖಂಡ : ಸ್ವಾಮಿ, ಧರ್ಮ ಲಂಡರು ನಾಸ್ತಿಕರು ಹೆಚ್ಚಾಗ್ತಾ ಇದಾರೆ, ಇದರಿಂದ ನಮ್ಮ ಪವಿತ್ರ ಭೂಮಿಯನ್ನು ಪಾರು ಮಾಡೋದು ನಮ್ಮ ಆದ್ಯ ಕರ್ತವ್ಯ. ಅದಕ್ಕಾಗಿ ನಾವು ಟೊಂಕ ಕಟ್ಟಿದ್ದೇವೆ.

ಮೇಯರ್ : ಸರಿ, ಸರಿ.

ನಾಯಕಿ : ಸ್ವಾಮಿ, ಜನರ ಬಡತನ ಅಜ್ಞಾನಗಳನ್ನು ಬಂಡವಾಳವಾಗಿಟ್ಟುಕೊಂಡು ಈ ಜನ ಧಾರ್ಮಿಕಶಾಹಿ ನಿರ್ಮಿಸುತ್ತಿದ್ದಾರೆ. ಇವರನ್ನು ಹತ್ತಿಕ್ಕದಿದ್ದರೆ ನಮ್ಮ ದೇಶಕ್ಕೆ ಮೋಕ್ಷವಿಲ್ಲ.

ಮೇಯರ್ : ಸರಿ, ಸರಿ.

ಮುಖಂಡ : ಸ್ವಾಮಿ, ನಮ್ಮ ಊರಿನ ಸ್ಥಳ ಪುರಾಣದಲ್ಲಿ ೧೭ನೇ ಅಧ್ಯಾಯದಲ್ಲಿ, ಹಿಂದೆ ಒಂದಾನೊಂದು ಕಾಲದಲ್ಲಿ ಕನ್ಯಾಕುಮಾರಿಯೆಂಬ ದೇವತೆ ಇಲ್ಲಿ ಬಂದು ಈ ಊರನ್ನು ಉದ್ಧರಿಸಿದ್ದನ್ನು ಹೇಳಿದೆ. ಅದೇ ಕನ್ಯಾಕುಮಾರಿ ಈಗ ಹುಡುಗಿಯ ರೂಪದಲ್ಲಿ ಬಂದು ಈ ಊರನ್ನು ಉದ್ಧರಿಸಲಿದ್ದಾಳೆ.

ನಾಯಕಿ : ಸ್ಥಳ ಪುರಾಣ ಎಲ್ಲ ಬೊಗಳೆ. ಕಂಠಮಟ್ಟ ಊಟಮಾಡಿ ಅದು ಜೀರ್ಣ ವಾಗದೇ ಇದ್ದೋರು ತಿಂದದ್ದನ್ನ ಜೀರ್ಣಮಾಡಿಕೊಳ್ಳೋದಕ್ಕೆ ಕಟ್ಟಿದ ಕಥೆ.

ಮುಖಂಡ : ಸ್ವಾಮಿ, ತಾವು ಚುನಾವಣೆಗೆ ನಿಂತಾಗ ಸನಾತನ ಧರ್ಮದ ಉದ್ಧಾರಕ್ಕೆ ಟೊಂಕ ಕಟ್ಟಿ ನಿಲ್ಲುವುದಾಗಿ ಪ್ರತಿಜ್ಞೆ ಮಾಡಿದ್ದಿರಿ.

ಮೇಯರ್ : ಹೌದು.

ನಾಯಕಿ : ಸ್ವಾಮಿ. ತಾವು ಎಲೆಕ್ಷನ್ ಪ್ರಚಾರ ಮಾಡುವಾಗ ಮೂಢನಂಬಿಕೆ ಪವಾಡಗಳನ್ನು ಸದೆ ಬಡಿಯುವುದಾಗಿ ವಾಗ್ದಾನ ಕೊಟ್ಟಿದ್ದಿರಿ.

ಮೇಯರ್ : ಹೌದು, ಹೌದು. ನಾ ಇಬ್ಬರಿಗೂ ಮಾತು ಕೊಟ್ಟಿದ್ದೆ, ನಾನು ಯಾವತ್ತೂ ಮಾತು ಕದಿಯೋವನಲ್ಲ.

ಮುಖಂಡ : ಇಬ್ಬರಿಗೂ ಮಾತು ಕೊಟ್ಟಿದ್ರಿ ?

ಮೇಯರ್ : ಇವತ್ತು ನಮ್ಮ ದೇಶದಲ್ಲಿ, ಇವತ್ತಿನ ಈ ಪರ್ವ ಕಾಲದಲ್ಲಿ ನಮಗೆ ಅತ್ಯಗತ್ಯವಾಗಿರೋದು ಏನು ? ಸ್ವಲ್ಪ ಯೋಚನೆ ಮಾಡ್ಬೇಕು. ಸನಾತನ ಧರ್ಮವೇ ? (ಸ್ವಲ್ಪ ತಡೆದು) ಅಲ್ಲ....

ಪವಾಡ ವಿರೋಧೀ ಸಂಘದವರು ಹರ್ಷೋದ್ಗಾರ ಮಾಡುತ್ತಾರೆ.

ಮೇಯರ್ : ಅಥವಾ ಆಧುನಿಕ ವಿಜ್ಞಾನವೇ (ಸ್ವಲ್ಪ ತಡೆದು) ಅದೂ ಅಲ್ಲ.

ಸನಾತನ ಧರ್ಮ ಸಂಘದವರ ಹರ್ಷೋದ್ಗಾರ.

ನಾಯಕಿ . ಎರಡೂ ಅಲ್ಲ ಅಂದ್ರೆ ?

ಮೇಯರ್ : ಎರಡೂ ಅಲ್ಲ ಅನ್ನೋದಿಲ್ಲ. ಎರಡೂ ಹೌದು ಅಂತೇನೆ. ನಮ್ಮ ಸನಾತನ ಧರ್ಮ ವೈಜ್ಞಾನಿಕವಾಗಬೇಕು. ನಮ್ಮ ಆಧುನಿಕ ವಿಜ್ಞಾನ ಸನಾತನ ಧರ್ಮವನ್ನ ಮೈಗೂಡಿಸಿಕೊಳ್ಳಬೇಕು. ಆಗಲೇ ಈ ದೇಶಕ್ಕೆ

ಮುಕ್ತಿ. ಆಗಲೇ ಈ ದೇಶದ ಬಡತನ ಮೌಢ್ಯ ಹರಿಯೋದು. ಸರ್ವರೂ ಸಮಾನರಾಗಿರೋ ಅಂಥ, ಸರ್ವರೂ ಸ್ವತಂತ್ರರಾಗಿರೋ ಅಂಥ, ಸರ್ವರೂ ಸರ್ವವೂ ಆಗಿರೋ ಅಂಥ ಸರ್ವೋದಯದ ಸಮಾಜ ಬರೋದು ಆವಾಗ !

ಎಲ್ಲರೂ ಅಭ್ಯಾಸ ಬಲದಿಂದ ಚಪ್ಪಾಳೆ ತಟ್ಟುತ್ತಾರೆ. ಆಮೇಲೆ, ತಮಗೇ ಅದು ತಪ್ಪು ಅನ್ನಿಸಿ, ಎರಡೂ ಗುಂಪು ಸಿಟ್ಟಿನಿಂದ ದಿಟ್ಟಿಸತೊಡಗುತ್ತವೆ.

ನಾಯಕಿ : ಇಂಥಾ ಕಣ್ಣೊರೆಸೋ ಮಾತೆಲ್ಲ ಬೇಡ. ನಾವೇನೂ ಮಕ್ಕಳಲ್ಲ. ಈ ದೇಶದಲ್ಲಿ ಮೂಢ ನಂಬಿಕೆಯನ್ನು ಮೂಲೋಚ್ಚಾಟನ ಮಾಡಲಿಕ್ಕಾಗಿ ನಾವು ಸೊಂಟಕಟ್ಟಿ ನಿಂತಿದ್ದೇವೆ.

ಮುಖಂಡ : ಸನಾತನ ಧರ್ಮದ ಪುನಃಸ್ಥಾಪನೆಗಾಗಿ ನಾವು ಕಟೀಬದ್ಧರಾಗಿದ್ದೇವೆ, ಅದಕ್ಕಾಗಿ ಬಲಿದಾನ ಕೊಡಲಿಕ್ಕೂ ಸಿದ್ಧರು.

ನಾಯಕಿ : ನಾವೂ ಸಿದ್ಧರು.

ಮುಖಂಡ : ನಾವೂ ಸಿದ್ಧರು.

ಕ್ರಮೇಣ ಎರಡೂ ಗುಂಪುಗಳ ಜಗಳ ಕೈ ಕೈ ಮಿಲಾವಣೆಯ ವರೆಗೆ ಸಾಗುತ್ತದೆ ಮೇಯರ್ ಬಂದು ಬಿಡಿಸುತ್ತಾನೆ.

ಮೇಯರ್ : ಬಿಡಿ ಬಿಡಿ. ಜಗಳ ಬಿಡಿ, ಇಲ್ಲಿ ಕೇಳಿ...ನಾ ಹೇಳೋದು ಕೇಳಿ.

ಡೆ ಮೇಯರ್ : ಮಾಡ್ಲಿ ಬಿಡಿ, ನೀವ್ಯಾಕೆ ಬಿಡಿಸ್ತೀರಿ ? ಆ ಹೆಣ್ಣು ಇದಾಳಲ್ಲ ಭಾರೀ ಜಂಬ ಅದಕ್ಕೆ. ಹೆಂಗಸಗಾರಿದ್ರೂ ಬೇಡ್ವಾ ಧರ್ಮ ಕರ್ಮ ಅಂತ ? ಹೀಗೆ ಗುಂಪು ಕಟ್ಕೊಂಡು ದೇವ್ರಿಲ್ಲ ದಿಂಡ್ರಿಲ್ಲ ಅಂತ ರಸ್ತೇಲಿ ಹೊರಟು ಬಿಡೋದಾ ?

ನಾಯಕಿ : ಏ, ಸೋಗಲಾಡಿ (ಎಂದು ಆಕೆಯ ಮೇಲೆ ಏರಿ ಬರುತ್ತಾಳೆ.)

ಮೇಯರ್ : (ಡೆಪ್ಯುಟಿಗೆ) ನೀ ಸ್ವಲ್ಪ ಸುಮ್ನೆ ಇರಮ್ಮ ನಿಂಗೆ ಗೊತ್ತಾಗೋಲ್ಲ (ನಾಯಕಿಗೆ) ಸ್ವಲ್ಪ ಸುಮ್ಮನಿರಿ. (ಎಲ್ಲರಿಗೆ) ಇಲ್ನೋಡಿ. ಶಾಂತಿ, ಶಾಂತಿ. ಶಾಂತಿ ಶಿಸ್ತು. ಮಹಾತ್ಮಾಜಿ ಹೇಳಿದ್ದು ಅದೇ ಅಲ್ವೆ ? ನಾನು ಯಾವತ್ತಿಂದ ಹೇಳ್ತಾ ಬಂದಿದ್ದು ಅದೇ ಅಲ್ವೆ ? ಶಾಂತರಾಗಿ ಈಗ ನೋಡಿ, ನೀವೆಲ್ಲ ಇಲ್ಲಿಂದ ಹೋಗಿ. ಮುಂದಿನದೆಲ್ಲ ನಾನು ನೋಡ್ಕೋ

ತೇನೆ. ಸದ್ಯಕ್ಕೆ ವಿಜ್ಞಾನಿಗಳೂ ಇಲ್ಲಿಂದ ಹೋಗಲಿ. ಇಲ್ಲಿ ಯಾರೂ ಬೇಡ. ಹುಂ, ನಡೀರಿ. ನಿಮಗೆಲ್ಲ ಹೇಳ್ತೇನೆ, ನಡೀರಿ.

ಎಂದು ಪ್ರತಿಯೊಬ್ಬರನ್ನೂ ನಂಬಿಸಿ ಕಳಿಸುತ್ತಾನೆ. ಎರಡು ಗುಂಪುಗಳೂ ಪರಸ್ಪರ ಮುಖಗಂಟ್ಟಿ ನೋಡಿಕೊಳ್ಳುತ್ತ ನಿಷ್ಕ್ರಮಿಸುತ್ತವೆ.

ಆ ಕಡೆಯಿಂದ ಪೋಲೀಸು ಪೇದೆಗಳು ಮಗುವನ್ನು (ಚಲಾಕಿ) ಕರೆದು ತರುತ್ತಾರೆ.

ಮೇಯರ್ : ಇವರು ಯಾರಿಗೂ ಆಗೋದಿಲ್ಲ. ನಾನೇ ಇದನ್ನ ಬಗೆಹರಿಸ್ಬೇಕು. ಇರಲಿ. (ಮಗುವಿಗೆ) ಬಾ ಅಮ್ಮಾ, ಇಲ್ಲಿ ಬಾ....

ಅದೇ ಸಮಯಕ್ಕೆ ಪೋಲೀಸ್ ಅಧಿಕಾರಿ ಕಳ್ಳನನ್ನು ಕರೆತಂದು ಸೆಲ್ಯೂಟ್ ಹಾಕಿ ನಿಲ್ಲುತ್ತಾನೆ.

ಮೇಯರ್ : ಏನ್ರೀ ಇದು ? ಇವನ್ಯಾರು ? ಏನಂತೆ ಇವನ ಗೋಳು ?

ಅಧಿಕಾರಿ : ಇವನು ಕಳ್ಳ ಸಾರ್, ಡಾಕು. ಪಕ್ಕಾ ಬದಮಾಶ್ (ಕಳ್ಳನಿಗೆ) ಒದೀಲೇನು ಒಂದು ಸಲ, ಬೇವರ್ಸಿತಂದು (ಮತ್ತೆ ಮೇಯರ್‌ಗೆ) ಹರಾಮಕೋರ ಸಾರ್ ಹಸೀ ಕೊರಮ.

ಮೇಯರ್ : ಇವನ್ನ ಯಾಕೆ ಇಲ್ಲಿ ಹಿಡಕೊಂಡು ಬಂದ್ರಿ, ಸ್ಟೇಶನ್ನಿಗೆ ತಗೊಂಡು ಹೋಗೋದು ಬಿಟ್ಟು ?

ಅಧಿಕಾರಿ : ಪಕ್ಕದ ಊರಲ್ಲಿ ಸಿಕ್ಕು ಬಿದ್ದನಂತೆ ಸಾರ್. ಅಲ್ಲೀ ಎಸ್. ಐ. ಕರಕೊಂಡು ಬಂದು ಬಿಟ್ಟು ಹೋದರು, ಈಗಷ್ಟೇ. ನೆನ್ನೇನೆ ಮೆಸೇಜ್ ಕಳಿಸಿದ್ರಂತೆ. ಅದು ನಮಗೆ ಬರ್ಲೇ ಇಲ್ಲ. ಇವನೇ ಈ ಈ ಹುಡುಗೀನ ಕದ್ದುಕೊಂಡು ಬಂದು ಇಲ್ಲಿ ಬಿಟ್ಟು ಹೋಗಿದ್ದಂತೆ,

ಮೇಯರ್ : ಹೌದೇನಯ್ಯಾ ?

ಕಳ್ಳ : ಹೌದು ಸ್ವಾಮಿ. ನಾನು ಕಳ್ಳ, ಡಾಕು,

ಹುಡುಗಿ : ಅಲ್ಲ ಅಲ್ಲ, ಇವನು ಮಾವ.

ಕಳ್ಳ : ಇಲ್ಲ ಸಾರ್, ನಾನು ಡಾಕು.

ಹುಡುಗಿ : ಅಲ್ಲ ಅಲ್ಲ. ಡಾಕು ಹಾಗೆ ಗಡ್ಡ ಮೀಸೆ ಕಟ್ಕೊಂಡಿದ್ದ, ಸಿನೆಮಾ ಮಾಡೋಕೆ. ಡಾಕು ಮಾವ ಆಗಿ ಬಿಟ್ಟಿದ್ದ. ಅವನು ನಿಜವಾಗಿ ಬಹೀ

ಮಾವ.

ಕಳ್ಳ : ಇಲ್ಲ ಸಾರ್. ನಾನು, ನಿಜವಾಗಿ ಡಾಕು, ಈ ಹುಡುಗೀನ ಅವಳ ಮನೆಯಿಂದ ಕದ್ಕೊಂಡು ಬಂದೆ.

ಮೇಯರ್ : ಹುಡುಗೀನ ಕದ್ಕೊಂಡು ಬಂದೆ!

ಕಳ್ಳ : ಹೌದು. ಇವಳನ್ನ ಮುಚ್ಚಿಟ್ಟು ಅವಳ ಅಪ್ಪನ ಹತ್ತಿರ ಹಣ ವಸೂಲು ಮಾಡಬೇಕು ಅಂತ ಕದ್ಕೊಂಡು ಬಂದೆ.

ಹುಡುಗಿ : ಇಲ್ಲಪ್ಪ, ಸುಳ್ಳು. ಅವನು ನನ್ನ ಮಾವ. ನಾನು ಅವನ ಜೊತೆ ನಡ ಕೊಂಡು ಬಂದೆ. ಹೀಗೆ, ಕಿತ್ತಳೆ ಹಣ್ಣಿನ ಮೇಲೆ ಇರುವೆ ಸುತ್ತುತ್ತಲ್ಲ, ಹಾಗೆ ಭೂಮಿ ಸುತ್ತಿಕೋತಾ ಬಂದ್ವಿ...

ಡೆ.ಮೇಯರ್ : ಇದೇನು ಕತೇರೀ ಇದು ?

ಮೇಯರ್ : ನೀ ಸ್ವಲ್ಪ ಸುಮ್ನಿರು...ಬೇಗ ಬಗೆ ಹರಿಸ್ಬೇಕು. ಜನಾ ಎಲ್ಲಾ ಬಂದು ಸೇರ್ತಿದಾರೆ...

ಕ್ರಮೇಣ ಎಲ್ಲ ಕಡೆಗಳಿಂದ ಜನ ಸೇರತೊಡಗುತ್ತಾರೆ.

ಅಧಿಕಾರಿ : ಇದೇನೋ ವಿಚಿತ್ರ ಆಗಿದೆ ಸಾರ್....ಈತ ತಾನು ಕಳ್ಳ ಅಂತ ಒಪ್ಕಿಕೋತಾನೆ. ಆದ್ರೆ ಐ ವಿಟ್‌ನೆಸ್ ಬೇಕಲ್ಲ. ಐವಿಟ್‌ನೆಸ್ ಆಗಿರೋ ಈ ಹುಡುಗಿ ವಿರುದ್ಧ ಸಾಕ್ಷಿ ಹೇಳ್ತಾಳೆ. ಈ ಕೇಸು ಕೋರ್ಟಿನಲ್ಲಿ ನಿಲ್ಲೋದಿಲ್ಲ, ಸಾರ್.

ಮೇಯರ್ : ಸುಮ್ನೆ ಇರ್ರಿ. ಕೋರ್ಟೂ ಬೇಡ, ಕಚೇರೀನೂ ಬೇಡ. ನಾನೇ ಬಗೆ ಹರಿಸ್ತೇನೆ....ಜೀಪ್ ಇದೆಯಾ ನಿಮ್ದು ?

ಅಧಿಕಾರಿ : ರೆಡಿ ಇದೆ ಸಾರ್.

ಮೇಯರ್ : ಏಯ್ ಡಾಕು—ನೀ ಡಾಕು ಹೌದೋ ಅಲ್ಲವೋ ಇರಲಿ ಬಿಡು—ಈ ತತ್‌ಕ್ಷಣ ಜೀಪು ಹತ್ತು. ಈ ಹುಡುಗಿ ಕರಕೋ. ಅವಳನ್ನ ತಗೊಂಡು ಹೋಗಿ ನೀನು ಎಲ್ಲಿಂದ ತಂದೆಯೋ ಅಲ್ಲಿ ಬಿಟ್ಟು ಆಮೇಲೆ ನೀನು ಎಲ್ಲಿಯಾದರೂ ಹೋಗು.

ಕಳ್ಳ : ನಂದು ತಪ್ಪಾಯಿತು ಸಾರ್.

ಮೇಯರ್ : ಮಾತಾಡ್ಬೇಡ, ನಡೆದುಬಿಡು. ಈ ಹುಡುಗಿ ನಿನ್ನ ಜೀವ ಉಳಿಸಿದಾಳೆ.

ಇನ್ನು ಒಂದು ಕ್ಷಣಾನೂ ಇಲ್ಲಿ ನಿಲ್ಲಬೇಡ. ನಿಂತರೆ ಜೈಲಿಗೆ ಹೋಗ್ಬೇಕಾಗುತ್ತೆ. ಹೊರಡು.

ಕಳ್ಳ : ನಾ ಜೈಲಿಗೆ ಹೋದ್ರೂ ಪರವಾಗಿಲ್ಲ ಸಾರ್. ಜೈಲಿಗೆ ಹೋಗ್ಬೇಕು ನಾ ಮಾಡಿದ ಕೆಲಸಕ್ಕೆ. ಏನೋ, ಕೈಯಲ್ಲಿ ಕಾಸಿರಲಿಲ್ಲ, ಸುಲಭವಾಗಿ ಹಣ ಮಾಡಿಬಿಡಬಹುದು ಅನ್ನಿಸ್ತು. ಈ ನಾಲಾಯಖ್ ಕೆಲಸ ಮಾಡ್ದೆ....

ಮೇಯರ್ : ಮತ್ತೆ ಉಸಿರು ಎತ್ತಬೇಡ, ಹೊರಟ್ಬಿಡು. ಈ ಹುಡುಗಿ ಕರಕೊಂಡು ಜೀಪು ಹತ್ತು, ನಡೆ.

ಕಳ್ಳ : ಹುಡುಗಿ ಅಲ್ಲ ಸಾರ್, ನಂಗೆ ಬುದ್ಧಿ ಕಲಿಸಿದ ತಾಯಿ ! ನನ್ನ ಬಚಾವ್ ಮಾಡಿದ ದೇವರು ! (ಎಂದು ಹುಡುಗಿಯನ್ನು ಎತ್ತಿಕೊಳ್ಳುವನು)

ಈಗ ಜನ ಜಂಗುಳಿ ಸೇರಿದೆ. ಎಲ್ಲರೂ ಆಶ್ಚರ್ಯದಿಂದ ಮಾತಾಡಿಕೊಳ್ಳು ತ್ತಿದ್ದಾರೆ.

ಮೇಯರ್ : ಹುಂ, ನಡಿ. ಜೀಪ್ ಹತ್ತು. (ಎನ್ನುತ್ತ ಅವನನ್ನು ದಬ್ಬುತ್ತಾನೆ)

ಅಧಿಕಾರಿ ಮುಂದೆ ಬಂದು ಆತನನ್ನು ಕೈಹಿಡಿದು ಒಯ್ಯುತ್ತಾನೆ. ಪೇದಗಳು ಹಿಂಬಾಲಿಸುತ್ತಾರೆ. ಜನರೆಲ್ಲಾ ಆ ಕಡೆ ಹೊರಡುತ್ತಾರೆ.

ಮೇಯರ್ : ನಡೀರಿ, ಎಲ್ಲಾ ಮನೇಗೆ ಹೋಗಿ. ಸಮಸ್ಯೆ ಅಷ್ಟೂ ಪರಿಹಾರ ಆಯ್ತು...ನೀವು ಯಾರೂ ಇಲ್ಲಿ ನಿಲ್ಲಬೇಡಿ, ನಡೀರಿ...(ಹೊರಡು ತ್ತಾನೆ, ಡೆಪ್ಯುಟಿಗೆ) ಏನು, ಬಾಯಿ ಕಳಕೊಂಡು ನೋಡ್ತೀಯಾ, ಬಾ.

ಅವರು ತೆರಳುತ್ತಾರೆ. ಎಲ್ಲ ಹೋದ ಮೇಲೆ ನಿಧಾನವಾಗಿ ಮುದುಕನ ಪ್ರವೇಶ. ಜೀಪ್ ಹೋದ ಕಡೆ ನೋಡಿ ನಿಟ್ಟುಸಿರುಬಿಡುತ್ತಾನೆ.

ಮುದುಕ : ಆಯ್ತು...ಮೂರು ದಿನ ಈ ಬಯಲಿಗೆ ಸಂಭ್ರಮ ಬಂದಿತ್ತು. ಊರ ಮಕ್ಕಳಿಗೆ ಸಂಭ್ರಮ ಬಂದಿತ್ತು....ಈ ಮುದುಕನಿಗೆ ಸಂಭ್ರಮ ಬಂದಿತ್ತು...(ಮೆಲ್ಲಗೆ ಮರ, ಪೋಸ್ಟ್ ಡಬ್ಬ, ಟೆಲಿಫೋನ್ ಕಂಬ, ಇವುಗಳ ಹತ್ತಿರಕ್ಕೆ ಹೋಗುತ್ತ) ಮರಪ್ಪ, ಹುಡುಗಿ ಹೋದ್ಲು........ ಆಕಾಶರಾಯ, ಹುಡುಗಿ ಹೋದ್ಲು....ಕೆಂಪಣ್ಣ, ಹುಡುಗಿ ಹೋದ್ಲು ....ನಾಚ್‌ವಾಲಿ, ಇನ್ನು ಯಾರಿಗೆ ನಾಚ್ ಮಾಡ್ತೀಯಾ ? (ಎನ್ನುತ್ತ

ಒಂದು ಕಡೆ ನಿಲ್ಲುತ್ತಾನೆ.) ಯಾಕೋ ಚಳಿ....ಚಳಿ....(ಎನ್ನುತ್ತ ಕುಸಿದು ಬೀಳುತ್ತಾನೆ.)

ಕ್ರಮೇಣ ಮರ, ಪೋಸ್ಟ್ ಡಬ್ಬ, ಟೆಲಿಫೋನ್ ಕಂಬ 'ಪಾಪ ಪಾಪ' 'ಪಾಪ ಪಾಪ' ಎನ್ನುತ್ತ ಆ ಲಯಕ್ಕೆ ಸರಿಯುತ್ತ ಮುದುಕನ ಬಳಿ ಬಂದು ನಿಂತು ಹಾಡತೊಡಗುತ್ತವೆ.

(ಹಾಡು) ಬೆಟ್ಟಕ್ಕೆ ಚಳಿಯಾದರೆ....

(ಹಾಡು ಕರಗುತ್ತಿದ್ದಂತೆ ನಾಟಕ ಮುಗಿಯುತ್ತದೆ)



ಚಿಟ್ಟಿಕ್ಕಿ ಚಿಕ್ಕಿಳಿಯಾದರೆ

ಮಕ್ಕಳ ನಾಟಕ

ಅಕ್ಷರ ಪ್ರಕಾಶನ

ವಿಜಯ ತೆಂಡುಲ್ಕರ್ ಅವರ ಮಕ್ಕಳ ನಾಟಕವೊಂದರಲ್ಲಿನ ಪಾತ್ರಗಳಿಂದ ಪ್ರೇರಿತವಾಗಿ ರಚಿತವಾದ ನಾಟಕ ಇದು. ಈಗಾಗಲೇ ಹಲವು ಸಲ ಪ್ರಯೋಗವಾಗಿ ಯಶಸ್ಸು ಗಳಿಸಿದ ಈ ನಾಟಕ ಪ್ರಯೋಗಕಾರರಿಗೆ ಬೇಕೆನ್ನುವ ಸ್ವಾತಂತ್ರ್ಯವನ್ನೂ ಅವಕಾಶವನ್ನೂ ಕೊಡುವಂತಿದೆ ; ಮಕ್ಕಳಿಗೆ ರಂಜಕವಾಗುವಂತಿದೆ.

ರೂ. ನಾಲ್ಕು

